Approved by the Department of Public Instruction

# ಕರ್ನಾಟಕ ಸ್ಕೌಟ್ ಮತ್ತು ಗೈಡ್

# The Karnataka Scout and Guide

Vol. 69 February 1987 No. 11



PUBLISHED BY
The Bharat Scouts & Guides, Karnataka State
Prof. P. Sivashankar Circle, Fort, Bangalore-560 002

Annual Subscription Rs. 10/– only



ಶ್ರೀ ರಾಬರ್ಟ್ ಬೇಡನ್ ಪೊವೆಲ್ ಅವರು ಕ್ರಿ. ಶ ೧೮೫೭ರ ಫೆಬ್ರವರಿ ೨೨ರಂದು
ಲಂಡನ್‌ನಲ್ಲಿ ಜನಿಸಿದರು. ವಿವರಗಳನ್ನು ಹಿನೇ ಪುಟದಲ್ಲಿ ಓದಿರಿ.

---

COVER PAGE

The Arch of Sri Kondajji Basappa Scout and Guide
Training Centre at Kurubarahally Cross
Near Kondajji on 11-12-1986.

Sri D. Venkateswara Rao, Deputy Commissioner, Chitradurga
Sri V. P. Deenadayalu Naidu, SCC, Major M. R. Narayan Singh, SC(S).
and Sri K. B. Shanmukhappa, State Secretary and other
invitees are also seen.

---

# ಕರ್ನಾಟಕ ಸ್ಕೌಟ್ ಮತ್ತು ಗೈಡ್

Vol. 69 February 1987 No. 11


## ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಹೊಸ ಕಾರ್ಯಕ್ರಮದ ಕಿರು ಪರಿಚಯ

ಈ ಕಾರ್ಯಕ್ರಮವನ್ನು ಈಗಿನ ಸಮಾಜದ ಪ್ರಗತಿಗೆ ಅನುಗುಣವಾಗಿ ಅಳವಡಿಸಿದೆ. ಸ್ಕೌಟ್ಸ್ ಮತ್ತು ಗೈಡ್ಸ್‌ನ ಶಿಕ್ಷಣದ ವಿಭಾಗಕ್ಕೂ ಹಾಗೂ ರಾಷ್ಟ್ರಕ್ಕೂ ಅಗ್ರಸ್ಥಾನ ಕೊಟ್ಟಿದೆ. ಚಟುವಟಿಕೆಗಳನ್ನು 10 + 2 + 3 ವಯಸ್ಸಿನ ಗುಂಪುಗಳನ್ನಾಗಿ ವಿಂಗಡಿಸಿದೆ. ಹಂತಗಳನ್ನು ಹೆಚ್ಚಿಸಿರುವುದಲ್ಲದೆ, ದೇಶಕ್ಕೆ ಅನುಗುಣವಾಗಿ ಬೇರೆ ಹೆಸರುಗಳನ್ನು ಕೊಟ್ಟಿದೆ. ಕಾರ್ಯಕ್ರಮಗಳು ವಯಸ್ಸು ಹಾಗೂ ಮಾನಸಿಕ ಅವಶ್ಯಕತೆಗೆ ಸಾಕಷ್ಟು ಮಣಿಯುತ್ತವೆ. ಇದಲ್ಲದೆ ಸಮಾಜದ ಏಳಿಗೆಗೆ ಹಾಗೂ ಸ್ವಂತ ಪ್ರಗತಿಗೆ ಅಡಿ ಮೆಟ್ಟಲಾಗಿರುವುದಲ್ಲದೆ ಬರೀ ಪರೀಕ್ಷಾರ್ಥವಾಗಿಲ್ಲ. ಸ್ಕೌಟಿಂಗ್‌ನ ನಾಲ್ಕು ಅಡಿಗಲ್ಲನ್ನೂ, World Bureauವಿನ ಹೊಸ ಯೋಜನೆಗಳನ್ನೂ, ನಾಡಿನ 20 ಅಂಶದ ಕಾರ್ಯಕ್ರಮವನ್ನೂ ಹೊಸ ಶೈಕ್ಷಣಿಕ ಒಲವನ್ನೂ ಮತ್ತು ರಾಷ್ಟ್ರದ ಅವಶ್ಯಕತೆಯನ್ನೂ ಒಳಗೊಂಡಿದೆ. ಅಕ್ಟೋಬರ್ 2ನೇ ತಾರೀಖಿನಿಂದ ಈ ಹೊಸ ಕಾರ್ಯಕ್ರಮ ಜಾರಿಗೆ ಬರುತ್ತದೆ.

### ಕಬ್ಸ್

| ಆಗ | | ಈಗ |
|---|---|---|
| ಕೋಮಲಪಾದ | — | ಪ್ರವೇಶ |
| ಒಂದು ತಾರೆ | — | ಪ್ರಥಮ ಚರಣ |
| ಎರಡು ತಾರೆ | — | ದ್ವಿತೀಯ ಚರಣ |
| | — | ತೃತೀಯ ಚರಣ |

### ಬುಲ್‌ಬುಲ್ಸ್

| ಆಗ | | ಈಗ |
|---|---|---|
| ಕೋಮಲಪಾದ | — | ಪ್ರವೇಶ |
| ಒಂದು ತಾರೆ | — | ಕೋಮಲ ಪಂಕ |
| ಎರಡು ತಾರೆ | — | ರಜತ ಪಂಕ |
| | — | ಸುವರ್ಣ ಪಂಕ |
| | — | ಹೀರಕ ಪಂಕ |

### ಸ್ಕೌಟ್ಸ್/ಗೈಡ್ಸ್

| ಆಗ | | ಈಗ |
|---|---|---|
| ಟೆಂಡರ್ ಫುಟ್ | — | ಪ್ರವೇಶ |
| IIನೇ ತರಗತಿ | — | ಪ್ರವೇಶ ಸೋಪಾನ |
| Iನೇ ತರಗತಿ | — | ದ್ವಿತೀಯ ಸೋಪಾನ |
| ಜಂಗಲ್ ಗೊಫ್ | — | ರಾಜ್ಯ ಪುರಸ್ಕಾರ |
| ಪ್ರೆಸಿಡೆಂಟ್ ಸ್ಕೌಟ್ಸ್/ಗೈಡ್ಸ್ | — | ರಾಷ್ಟ್ರಪತಿ ಸ್ಕೌಟ್ಸ್/ಗೈಡ್ಸ್ |

### ಕಬ್ಸ್/ಬುಲ್‌ಬುಲ್ಸ್

ಕಬ್ಸ್/ಬುಲ್‌ಬುಲ್‌ಗಳು ಪೂರ್ಣ ತರಬೇತಿಯಾದ ನಂತರ ಸಮರ್ಥರಾಗಿ ಈ ಅಂಶಗಳನ್ನು ಹೊಂದಿರುತ್ತಾರೆ.

1. ಒಳ್ಳೆಯ ನಡತೆಯನ್ನು ವೃದ್ಧಿಗೊಳಿಸಿಕೊಂಡು ಶೀಲವಂತರಾಗುವುದು.
2. ಪರಿಶ್ರಮಪಟ್ಟು ಕಲಿತ ವಿದ್ಯೆಯಿಂದ ಮಾದರಿಯ ಪ್ರಜೆಯಾಗುವುದು.
3. ಕಬ್ಸ್/ಬುಲ್‌ಬುಲ್ಸ್ ಮಾಡಿ ಕಲಿಯುವ ಕೌಶಲ್ಯದಿಂದ ಸಮಾಜದಲ್ಲಿ ಒಳ್ಳೆಯ ಮಕ್ಕಳಾಗಿರುವುದಲ್ಲದೆ ಉತ್ತಮ ಸ್ಕೌಟ್ಸ್/ಗೈಡ್ಸ್‌ಗಳಾಗುತ್ತಾರೆ.
4. ಪರೋಪಕಾರಿಯಾಗಿರುವುದು.
5. ಸರ್ವತೋಮುಖ ಏಳಿಗೆಗೆ ಬೇಕಾಗುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದು.
6. ಪ್ರಕೃತಿಯ ಸೌಂದರ್ಯವನ್ನು ಅನುಭವಿಸಿ ದೈವಾಂಶವನ್ನು ಇದರಲ್ಲಿ ಕಾಣುವುದು.
7. ಅವನ/ಅವಳ ಕುಶಲ ಕಲೆಗಳಲ್ಲಿ ಹೆಚ್ಚಿನ ಕೌಶಲ್ಯವನ್ನು ಹೊರ ಹೊಮ್ಮುವುದು.
8. ಅವನ/ಅವಳ ಅಭಿರುಚಿಗೆ ತಕ್ಕಂತೆ ಸಾಮಾನುಗಳನ್ನು ಶೇಖರಿಸುವುದು.
9. ದೊಡ್ಡವರಲ್ಲಿ ವಿಧೇಯತೆಯನ್ನೂ, ಚಿಕ್ಕವರಲ್ಲಿ ಹಾಗೂ ನೆರೆಹೊರೆಯವರಲ್ಲಿ ವಾತ್ಸಲ್ಯವನ್ನೂ ಕಾಣುವ ಗುಣಗಳನ್ನು ಹೊಂದುವುದು.
10. ಸಾಹಸದ ಅವಶ್ಯಕತೆಯನ್ನು ಪೂರೈಸಿಕೊಳ್ಳುವುದು.
11. ತಲೆತಲಾಂತರದಿಂದ ಬಂದ ಸಂಪ್ರದಾಯ ಹಾಗೂ ಧರ್ಮಕ್ಕೂ ಮೆಚ್ಚುಗೆ ತೋರಿಸಿ ಪಾಲಿಸುವುದು.
12. ದೈವ ಸೃಷ್ಟಿಯನ್ನು ಮತ್ತು ಸಾರ್ವಜನಿಕರ ಸ್ವತ್ತನ್ನು ಕಾಪಾಡುವುದು.
13. ಹಿರಿಯರಿಗೆ ವಿಧೇಯರಾಗಿ ನಡೆಯುವುದು.
14. ಅವನ/ಅವಳ ರಾಜ್ಯ, ನಗರ ಹಾಗೂ ಸಂಸ್ಕೃತಿಯ ಬಗ್ಗೆ ತಿಳುವಳಿಕೆ ಪಡೆಯುವುದು.

## ಸ್ಕೌಟ್ಸ್/ಗೈಡ್ಸ್

ಪೂರ್ಣ ತರಬೇತಿ ಹೊಂದಿದ ಸ್ಕೌಟ್ಸ್/ಗೈಡ್ಸ್ ಕೆಳಗೆ ಕಂಡ ಅಂಶಗಳಿಗೆ ಸಮರ್ಥರಾಗಿರುತ್ತಾರೆ.

1. ಒಳ್ಳೆಯ ನಡೆನುಡಿಯನ್ನು ತಮ್ಮಲ್ಲಿ ಅಭಿವೃದ್ಧಿಗೊಳಿಸಿಕೊಂಡಿರುವುದರಿಂದ ಆರೋಗ್ಯದಾಯಕರಾಗಿಯೂ, ಉಪಕಾರಿಯಾಗಿಯೂ ಇರುತ್ತಾರೆ.
2. ಕಲಿತ ವಿದ್ಯೆಯನ್ನು ಪ್ರಯೋಗಮಾಡಿ, ಕೌಶಲ್ಯವನ್ನು ಹೆಚ್ಚಿಸಿಕೊಂಡು, ಆತ್ಮವಿಶ್ವಾಸವುಳ್ಳವರಾಗಿರುತ್ತಾರೆ.
3. ನಾಗರಿಕರ ಹಕ್ಕುಗಳನ್ನು ಅರಿತು, ಮೂಲತತ್ವವನ್ನು ಒಪ್ಪಿಕೊಂಡು ಅದರಂತೆ ನಡೆಯುವುದು.
4. ಸರ್ವತೋಮುಖ ಏಳಿಗೆಗೆ ಯಾವಾಗಲೂ ಕಾರ್ಯಕ್ರಮಗಳನ್ನು ರೂಪಿಸುವುದು.
5. ತಮ್ಮ ಯೋಗ್ಯತೆಗಳನ್ನು ಅರಿತು, ಅದನ್ನು ಸಮಾಜ ಸುಧಾರಣೆಗೆ ಪ್ರಯೋಗಮಾಡುವುದು.
6. ಪ್ರಕೃತಿಯ ಸೌಂದರ್ಯವನ್ನು ವೀಕ್ಷಿಸಿ, ದೈವಕ್ಕೆ ತಲೆಬಾಗಿ ಪ್ರಾರ್ಥನೆ ಸಲ್ಲಿಸುವುದು.
7. ಉಪಯುಕ್ತವಾದ ಕೈ ಕೆಲಸ ಮಾಡುವುದು.
8. ಜನಾಂಗದ ಸಂಪತ್ತೇ ತಮ್ಮ ಸಂಪತ್ತೆಂದು ಕಾಪಾಡುವುದು.
9. ಅವನು/ಅವಳು ಸಮಾಜದ ಒಂದು ಅಂಗವೆಂದು ಭಾವಿಸಿ ತನ್ನ ಕರ್ತವ್ಯವನ್ನು ಮಾಡುವುದು.
10. ಸ್ಕೌಟಿಂಗ್/ಗೈಡಿಂಗ್‌ನ ಕುಶಲ ಕಲೆಗಳನ್ನು ಹೆಚ್ಚಿಸಿ, ಸಾಹಸ ಕಾರ್ಯಗಳನ್ನು ಕೈಗೊಂಡು, ಸಾಹಸ ಕಾರ್ಯಗಳಿಗೆ ಉತ್ತೇಜನ ನೀಡುವುದು.
11. ನಮ್ಮ ರಾಷ್ಟ್ರದ ಪರಂಪರೆಯನ್ನು, ಸಂಸ್ಕೃತಿಯನ್ನು ಅರಿತು, ಅದನ್ನು ಅಭಿವೃದ್ಧಿಗೊಳಿಸಲು ಪಣತೊಡುವುದು.
12. ಒಂಟಿಯಾಗಲಿ ಅಥವಾ ಗುಂಪಿನಲ್ಲಾಗಲಿ ಪ್ರಕೃತಿಯನ್ನು ಕಾಪಾಡುವುದಲ್ಲದೆ, ಇತರರಿಗೆ ಇದರ ತಿಳುವಳಿಕೆಯನ್ನು ಕೊಡುವುದು.
13. ನಾಯಕತ್ವದ ಗುಣಗಳನ್ನು ವೃದ್ಧಿಗೊಳಿಸಿಕೊಂಡು ಅಗತ್ಯವಿದ್ದಲ್ಲಿ ಹೊರ ಹೊಮ್ಮುವುದು.
14. ದೇಶ ಮತ್ತು ಜನಾಂಗವನ್ನು ಅಧ್ಯಯನ ಮಾಡಿ ರಾಷ್ಟ್ರೀಯ ಭಾವೈಕ್ಯತೆಗೆ ಸಹಭಾಗಿಯಾಗುವುದು.

**ಶ್ರೀಮತಿ ಮೈಥಿಲಿ ಸಂಪತ್**
ರಾಜ್ಯ ಸಹಾಯಕ ಆಯುಕ್ತೆ (ಗೈ)

# ಚಳ್ಳಕೆರೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ

ಚಳ್ಳಕೆರೆ ತಾಲ್ಲೂಕು ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ರ್‍ಯಾಲಿ ಹಾಗೂ ನ್ಯಾಷನಲ್ ಇಂಟಿಗ್ರೇಟೆಡ್ ಪೀಸ್ ಮಾರ್ಚನ್ನು ಡಿ. ೧೩ರಿಂದ ೧೫ರವರೆಗೆ ನಡೆಸಲಾಯಿತು.

ಡಿ. ೧೩ರಂದು ಚಳ್ಳಕೆರೆಯ ರೋಟರಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಜಯಪ್ರಕಾಶ್ ಅವರ ಅಧ್ಯಕ್ಷತೆಯಲ್ಲಿ ಚಿತ್ರದುರ್ಗ ಜಿಲ್ಲಾ ಆಯುಕ್ತ (ಸ್ಕೌ) ಶ್ರೀ ಸಿ. ಎಸ್. ಎನ್. ಮೂರ್ತಿ ಅವರು ಉದ್ಘಾಟಿಸಿದರು. ಜಿಲ್ಲಾ ಆಯುಕ್ತೆ (ಗೈ) ಶ್ರೀಮತಿ ಗಿರಿಜಮ್ಮ ಡಿ. ಎಂ. ರುದ್ರಯ್ಯ, ಜಿಲ್ಲಾ ಕಾರ್ಯದರ್ಶಿ ಶ್ರೀ ಶ್ರೀನಿವಾಸ ಶೆಟ್ಟಿ ಹಾಗೂ ಕ್ಷೇತ್ರಾಭಿವೃದ್ಧಿ ಅಧಿಕಾರಿ ಶ್ರೀ ಇ. ಜಯರಾಮ ರೆಡ್ಡಿ ಇವರು ಮುಖ್ಯ ಅತಿಥಿಗಳಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳ ಬಗ್ಗೆ ತಿಳಿಸಿದರು. ಸಹಾಯಕ ಶಿಕ್ಷಣಾಧಿಕಾರಿ ಶ್ರೀ ವಿ. ರಂಗಯ್ಯ ಸ್ವಾಗತಿಸಿದರೆ, ಶ್ರೀ ಜಿ. ಎಸ್. ಬಸವರಾಜಪ್ಪ ಇವರು ವಂದನಾರ್ಪಣೆ ಮಾಡಿದರು.

ಡಿ. ೧೪ರಂದು ಬೆಳಿಗ್ಗೆ ೯ ಗಂಟೆಗೆ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಂದ ಚಿತ್ರಯ್ಯನಹಟ್ಟಿ ಬಡಾವಣೆಯಲ್ಲಿ ಸುಮಾರು ೬೦೦ ಸಸಿಗಳನ್ನು ನೆಡಿಸಿ ನೀರೆರೆಯಲಾಯಿತು.

ರಾಜ್ಯ ವಿದ್ಯಾ ಸಚಿವ ಶ್ರೀ ಡಿ. ಮಂಜುನಾಥ್ ಅವರು ಸಂಜೆ ೫ ಗಂಟೆಗೆ ಮುಕ್ತಾಯ ಭಾಷಣ ನಡೆಸಿದರು. ರೋಟರಿ ಕಾರ್ಯದರ್ಶಿ ಶ್ರೀ ಗೋಪಾಲಕೃಷ್ಣ ಅವರು ಅಧ್ಯಕ್ಷತೆ ವಹಿಸಿದ್ದರು. ಚಳ್ಳಕೆರೆಯ ಶಾಸಕ ಶ್ರೀ ತಿಪ್ಪೇಸ್ವಾಮಿ ಇವರು ಪ್ರಶಸ್ತಿ ಪತ್ರಗಳನ್ನು ಕೊಟ್ಟರೆ, ಮೊಳಕಾಲ್ಮೂರು ಶಾಸಕ ಶ್ರೀ ಪುರ್ರಮುತ್ತಪ್ಪ ಇವರು ಬಹುಮಾನ ವಿತರಣೆ ಮಾಡಿದರು. ಇದೇ ಸಂದರ್ಭದಲ್ಲಿ ಶ್ರೀ ಸಿ. ಆರ್. ಮಹಮದ್ ಜಾಹಿರುದ್ದೀನ್ ಇವರಿಗೆ ಶಾಲು ಹೊದಿಸಿ ಸನ್ಮಾನಿಸಲಾಯಿತು. ಸರ್ವಶ್ರೀ ಜಿ. ಎಸ್. ಬಸವರಾಜಪ್ಪ ಮತ್ತು ಗೋಪಾಲಕೃಷ್ಣ ಇವರಿಗೆ ಸಚಿವರಿಂದ ವಂದನಾಪೂರ್ವಕ ಪದಕಗಳನ್ನು ಕೊಟ್ಟು ಸನ್ಮಾನಿಸಲಾಯಿತು. ಪುರಸಭೆ ಅಧ್ಯಕ್ಷ ರಾಜಶೇಖರಪ್ಪ, ಜಾಹಿರುದ್ದೀನ್, ತಿಪ್ಪೇಸ್ವಾಮಿ ಮತ್ತು ಪುರ್ರಮುತ್ತಪ್ಪ ಇವರು ಮಾತನಾಡಿದರು. ಶ್ರೀ ರಂಗಯ್ಯ ಅವರಿಂದ ಸ್ವಾಗತ, ಶ್ರೀ ಎಂ. ಆರ್. ನಾರಾಯಣಪ್ಪ ಅವರಿಂದ ವರದಿ ವಾಚನ ಮತ್ತು ಶ್ರೀ ಜಿ. ಎಸ್. ಬಸವರಾಜಪ್ಪ ಅವರಿಂದ ವಂದನಾರ್ಪಣೆ ಆಯಿತು.

ಈ ಮೇಳಕ್ಕೆ ೪೦೦ ಸ್ಕೌಟ್ಸ್ ಗೈಡ್ಸ್‌ಗಳು ಹಾಗೂ ೫೦ ಶಿಕ್ಷಕರು ಆಗಮಿಸಿದ್ದರು.

ಡಿ. ೧೫ರಂದು ಬೆಳಿಗ್ಗೆ ಧ್ವಜ ಅವರೋಹಣದ ನಂತರ ಮೇಳವನ್ನು ವಿಸರ್ಜಿಸಲಾಯಿತು.

---

# ಹೊನ್ನಾವರದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಮೇಳ

ದಿನಾಂಕ 23-12-1986ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಹೊನ್ನಾವರ ತಾಲ್ಲೂಕಿನ ಪ್ರೌಢ ಶಾಲೆ ಮತ್ತು ಪೂರ್ಣ ಪ್ರಾಥಮಿಕ ಶಾಲಾ ಮಕ್ಕಳ ಒಂದು ದಿನದ ಮೇಳವನ್ನು ಸೇಂಟ್ ಥಾಮಸ್ ಪ್ರೌಢಶಾಲೆಯಲ್ಲಿ ಏರ್ಪಡಿಸಿತ್ತು. ಇದರಲ್ಲಿ ಒಟ್ಟು 400 ಮಕ್ಕಳು ಪಾಲ್ಗೊಂಡಿದ್ದು ಸ್ಕೌಟಿಂಗ್‌ನ ಬಗ್ಗೆ ಹೆಚ್ಚಿನ ಜ್ಞಾನವನ್ನು ಪಡೆದುಕೊಂಡರು.

ಅಂದು ಮುಂಜಾನೆ 9 ಗಂಟೆಗೆ ಮೇಳವನ್ನು ಹೊನ್ನಾವರದ ತಹಶೀಲದಾರರಾದ ಶ್ರೀ ಆರ್. ಜಿ. ಜೋಶಿ (ಕೆ. ಎ. ಎಸ್.) ಇವರು ಉದ್ಘಾಟಿಸಿದರು. ಅಧ್ಯಕ್ಷರಾದ ಶ್ರೀ ಜೆ. ಅಬ್ರಹಾಂ ಇವರು ಬಂದ ಸ್ಕೌಟ್ಸ್ ಮತ್ತು ಗೈಡರನ್ನೂ ಅತಿಥಿಗಳನ್ನೂ ಸ್ವಾಗತಿಸಿದರು.

ಸಂಜೆ 4-30ಕ್ಕೆ ಹೊನ್ನಾವರದ ಬಿ. ಡಿ. ಓ.ರಾದ ಶ್ರೀ ಸಂಕದಾಳ ಇವರು ಮುಕ್ತಾಯ ಸಮಾರಂಭಕ್ಕೆ ಬಂದು ಕಾರ್ಯಕ್ರಮವನ್ನು ಚಂದಗಾಣಿಸಿ ಕೊಟ್ಟರು. ಕಾರ್ಯದರ್ಶಿಯವರಾದ ಶ್ರೀ ಬಿ. ಡಿ. ಫರ್ನಾಂಡಿಸ್ ಸ್ಥಳೀಯ ಸಂಸ್ಥೆಯು ಒಂದು ವರ್ಷದಲ್ಲಿ ಸಾಧಿಸಿದ ಕಾರ್ಯಚಟುವಟಿಕೆಗಳ ವರದಿಯನ್ನು ಸಾದರಪಡಿಸಿದರು. ಎ. ಎಸ್. ಓ. ಸಿ. ಶ್ರೀ ಬಿ. ವಿ. ನಾಯಕ ಬೊಮ್ಮನ್ ಇವರು ಸ್ವಾಗತಿಸಿದರು. ಶ್ರೀ ಜಿ. ಆರ್. ಕಲಬಾಗ, ಪ್ರಿನ್ಸಿಪಾಲ್ ಸೆಂಟ್ ಥಾಮಸ್ ಪ್ರೌಢ ಶಾಲೆ ಇವರು ವಂದನಾರ್ಪಣೆಯನ್ನು ಮಾಡಿದರು. ಕೊನೆಯಲ್ಲಿ ವಿವಿಧ ಶಾಲೆಗಳಿಂದ ಬಂದ ಸ್ಕೌಟ್ಸ್ ಗೈಡ್ಸ್ ಮಕ್ಕಳ ಮನರಂಜನಾ ಕಾರ್ಯಕ್ರಮದ ಜೊತೆಗೆ ಮೇಳವು ಮುಕ್ತಾಯಗೊಂಡಿತು.

# ಚಿಕ್ಕಮಗಳೂರಿನಲ್ಲಿ ಸ್ಕೌಟ್ಸ್, ಗೈಡ್ಸ್ ಮೇಳ

ಚಿಕ್ಕಮಗಳೂರು ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ತಾಲ್ಲೂಕು ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳವನ್ನು ಡಿ. ೨೦, ೨೧ ಮತ್ತು ೨೨ರಂದು ಸ್ಥಳೀಯ ಸಂತ ಜೋಸೆಫರ ಬಾಲಿಕಾ ಪ್ರೌಢ ಶಾಲಾ ಆವರಣದಲ್ಲಿ ಸಂಘಟಿಸಲಾಗಿತ್ತು. ತಾಲ್ಲೂಕಿನ ಅನೇಕ ಶಾಲೆಗಳಿಂದ ೧೫೦ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್ಸ್, ೨ ರೋವರ್‌ಗಳು ಹಾಗೂ ೧೭ ಶಿಕ್ಷಕ ಶಿಕ್ಷಕಿಯರು ಭಾಗವಹಿಸಿದ್ದರು.

ಜಿಲ್ಲಾ ಉಪನಿರ್ದೇಶಕ ಶ್ರೀ ಹೆಚ್. ಎನ್. ರಾಮಸ್ವಾಮಿ ಐಯಂಗಾರ್ ಅವರ ಅಧ್ಯಕ್ಷತೆಯಲ್ಲಿ ರೋಟರಿ ಅಧ್ಯಕ್ಷ ಶ್ರೀ ಹೆಚ್. ಕೆ. ಮಂಜುನಾಥ್ ಮೇಳವನ್ನು ಉದ್ಘಾಟಿಸಿದರು. ಸಹಾಯಕ ಜಿಲ್ಲಾ ಆಯುಕ್ತ (ಸ್ಕೌ) ಶ್ರೀ ಎಂ. ಚಂದ್ರಶೇಖರಯ್ಯನವರು ಮುಖ್ಯ ಅತಿಥಿಗಳಾಗಿದ್ದರು. ಕಾರ್ಯದರ್ಶಿ ಶ್ರೀ ಸಿ. ಕೆ. ಅಬ್ದುಲ್ ಹಮೀದ್ ಅವರು ಸ್ವಾಗತಿಸಿದರೆ, ಸಹಾಯಕ ಸಂಘಟನಾ ಆಯುಕ್ತ (ಸ್ಕೌ) ಶ್ರೀ ನಾರಾಯಣ ಶೆಟ್ಟಿ ಮೇಳದ ಚಟುವಟಿಕೆಗಳನ್ನು ವಿವರಿಸಿದರೆ ಜಿಲ್ಲಾ ಸಹಾಯಕ ಆಯುಕ್ತೆ (ಗೈ) ಶ್ರೀಮತಿ ಟಿ. ಕೆ. ಶಕುಂತಲ ವಂದನೆ ಸಲ್ಲಿಸಿದರು.

ಧ್ವಜ ನಿರ್ಮಾಣ, ಪ್ರಥಮ ಚಿಕಿತ್ಸೆ, ನಾಟ್ಸ್ ಮತ್ತು ಲಾಷಿಂಗ್ಸ್ ಹಾಗೂ ಸಿಗ್ನಲಿಂಗ್ ಸ್ಪರ್ಧೆಗಳನ್ನು ನಡೆಸಲಾಯಿತು. ಕಬ್ಸ್ ಮತ್ತು ಬುಲ್‌ಬುಲ್‌ಗಳಿಗೆ ಘನ ವಂದನೆ, ಹಾಡು ಕುಣಿತಗಳ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಊಟದ ನಂತರ ರಾತ್ರಿ ೭-೩೦ಕ್ಕೆ ಶಿಬಿರಾಗ್ನಿಯನ್ನು ಬೆಂಗಳೂರಿನ ಸ್ಟಾಟಿಸ್ಟಿಕಲ್ ಅಸಿಸ್ಟೆಂಟ್ ಶ್ರೀ ಮಾಡೊಳ್ಳಿಯವರು ಉದ್ಘಾಟಿಸಿದರು.

ಡಿ. ೨೧ರಂದು ಬೆಳಿಗ್ಗೆ ೭-೩೦ಕ್ಕೆ ಸರ್ವಧರ್ಮೀಯ ಪ್ರಾರ್ಥನೆಯ ನಂತರ ಧ್ವಜಾರೋಹಣ ಸಮಾರಂಭ ನೆರವೇರಿತು. ನಂತರ ಶ್ರೀ ಎಂ. ಚಂದ್ರಶೇಖರಯ್ಯನವರ ಮಾರ್ಗದರ್ಶನದಲ್ಲಿ ನಗರದ ಮುಖ್ಯ ಬೀದಿಗಳಲ್ಲಿ ದಳಗಳ ಪಥಚಲನ ಕಾರ್ಯಕ್ರಮ ನೆರವೇರಿತು. ಇದರಲ್ಲಿ ಸ್ಥಳೀಯ ಸ್ಕೌಟ್ಸ್, ಗೈಡ್‌ಗಳು ಭಾಗವಹಿಸಿದ್ದರು. ನಂತರ 'ಸ್ಕಿಲ್-ಓ-ರಮಾ', ಕರಕುಶಲತೆಗಳಲ್ಲಿ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್‌ಗಳು ಭಾಗವಹಿಸಿದ್ದರು.

ಸರ್ವಶ್ರೀ ಕಾಶಿ ವಿಶ್ವನಾಥ ಶ್ರೇಷ್ಠಿ, ವಿಠಲ ರಾವ್, ಕೆ. ಹೆಚ್. ಮಂಜುನಾಥ, ಚೆಲುವ ರಾಜ್ ಮತ್ತು ಶ್ರೀಮತಿ ವಜ್ರೇಶ್ವರಿ ಇವರುಗಳು ಮಕ್ಕಳಿಗೆ ಪ್ರೋತ್ಸಾಹಕ್ಕಾಗಿ ಸಂಸ್ಥೆಯ ವತಿಯಿಂದ ಕೊಟ್ಟ ಗ್ರೇಡ್ ಸರ್ಟಿಫಿಕೇಟ್‌ಗಳ ಜೊತೆಗೆ ಇತರ ಬಹುಮಾನಗಳನ್ನೂ ನೀಡಿದರು. ಮೌಂಟನ್ ವ್ಯೂ ಶಾಲೆ, ಸಂತ ಜೋಸೆಫ್ ಶಾಲೆ, ವಾಸವಿ ವಿದ್ಯಾಸಂಸ್ಥೆ, ಟೌನ್ ಮಹಿಳಾ ಸಮಾಜ ಶಾಲೆಗಳು ಪ್ರಥಮ ಸ್ಥಾನ ಪಡೆದುಕೊಂಡವು. ಉಳಿದ ಶಾಲೆಗಳು ದ್ವಿತೀಯ ಸ್ಥಾನ ಪಡೆದುಕೊಂಡವು.

ಸಾಹಿತಿ ಶ್ರೀ ಕಾಶಿ ವಿಶ್ವನಾಥ ಶ್ರೇಷ್ಠಿ ಇವರು ಮುಕ್ತಾಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಸಹಾಯಕ ವಿದ್ಯಾಧಿಕಾರಿ ಶ್ರೀ ಎಂ. ಚಂದ್ರಶೇಖರಯ್ಯನವರು ಬಹುಮಾನ ಮತ್ತು ಗ್ರೇಡ್ ಸರ್ಟಿಫಿಕೇಟ್‌ಗಳನ್ನು ವಿತರಿಸಿದರು. ಜಿಲ್ಲಾ ತರಬೇತಿ ಆಯುಕ್ತ (ಸ್ಕೌ) ಮತ್ತು ಜಿಲ್ಲಾ ಕಾರ್ಯದರ್ಶಿಗಳು ಉಪಸ್ಥಿತರಿದ್ದು ಕಾರ್ಯಕ್ರಮ ವೀಕ್ಷಿಸಿದರು.

ಕಾರ್ಯಕ್ರಮದ ಆರಂಭದಲ್ಲಿ ಸ್ಥಳೀಯ ಸಂಸ್ಥೆಯ ಸಹಾಯಕ ಕಾರ್ಯದರ್ಶಿ ಕು॥ ವೆರೋನಿಕಾ ಲೋಬೊ ಸ್ವಾಗತಿಸಿದರೆ, ಶ್ರೀ ನಾರಾಯಣ ಶೆಟ್ಟಿ ಮೇಳದ ವರದಿಯನ್ನು ಓದಿದರು. ಕಾರ್ಯದರ್ಶಿ ಶ್ರೀ ಅಬ್ದುಲ್ ಹಮೀದ್ ಅವರು ಮೇಳದ ಯಶಸ್ಸಿಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ವಂದನೆ ಸಲ್ಲಿಸಿದರು.

ಈ ಮೇಳದ ಯಶಸ್ಸಿಗೆ ಸಂತ ಜೋಸೆಫ್ ಕಾನ್ವೆಂಟಿನ ಮದರ್ ಸುಪೀರಿಯರ್ ಹಾಗೂ ಅವರ ಉಪಾಧ್ಯಾಯ ವೃಂದದವರು, ಶ್ರೀ ಎಂ. ಎನ್. ಷಡಾಕ್ಷರಿ, ರೋವರ್ಸ್‌ಗಳಾದ ಚಿ। ಷಣ್ಮುಗಂ ಮತ್ತು ಚಿ। ಪ್ರಕಾಶ್, ಶ್ರೀಮತಿಯರಾದ ಆರ್. ಎನ್. ವಿಜಯಲಕ್ಷ್ಮಿ, ಶಕುಂತಲ ಮತ್ತು ಎಲ್ಲಾ ಸ್ಕೌಟರ್ಸ್/ಗೈಡರ್ಸ್ ಸಹಾಯಕರಾಗಿದ್ದರು.

ಡಿ. ೨೨ರ ಬೆಳಿಗ್ಗೆ ೯ ಗಂಟೆಗೆ ಧ್ವಜ ಅವರೋಹಣದೊಂದಿಗೆ ಕಾರ್ಯಕ್ರಮ ಮುಕ್ತಾಯಗೊಂಡಿತು.

# ರಾಬರ್ಟ್ ಬೇಡನ್ ಪೊವೆಲ್

ವಿ. ಎಸ್. ರಾಜರಾವ್

ಕ್ರಿ. ಶ. ೧೮೫೭ರ ಫೆಬ್ರವರಿ ೨೨ರಂದು ಶ್ರೀ ರಾಬರ್ಟ್ ಬೇಡನ್ ಪೊವೆಲ್ ಅವರು ಲಂಡನ್ನಿನಲ್ಲಿ ಜನಿಸಿದರು. ಅವರ ತಂದೆ ರೆವರೆಂಡ್ ಬೇಡನ್ ಪೊವೆಲ್ ಎಂಬುವರು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಪ್ರೌಢ ಪಂಡಿತರು. ಅವರ ತಾಯಿ ಸ್ಮಿತ್ ಎಂಬಾತನ ಮಗಳು. ಆಕೆಯ ಅಣ್ಣ ಖಗೋಳ ಶಾಸ್ತ್ರದಲ್ಲಿ ನಿಪುಣರಾಗಿದ್ದರು. ಅಲ್ಲದೆ ಅವರು ವರ್ಜೀನಿಯ ಎಂಬ ಪ್ರದೇಶವನ್ನು ಕಂಡುಹಿಡಿದ ಕ್ಯಾ। ಜಾರ್ಜ್ ಸ್ಮಿತ್ ಎಂಬುವರ ವಂಶಕ್ಕೆ ಸೇರಿದವರು. ತಮ್ಮ ತಂದೆ ಹೇಳುತ್ತಿದ್ದುದನ್ನೇ ಬೇಡನ್ ಪೊವೆಲ್ ಹೇಳಿರುವುದು. — "ನಾವು ನಮ್ಮ ಸುಖ, ಲಾಭಗಳನ್ನು ನೋಡಿಕೊಳ್ಳುವುದಕ್ಕೇ ಹುಟ್ಟಿಲ್ಲ—ಇತರರಿಗೆ ಉಪಕಾರ ಮಾಡಬೇಕಾದುದೇ ನಾವು ಭೂಮಿಯ ಮೇಲೆ ಹುಟ್ಟಿರುವ ಮುಖ್ಯ ಉದ್ದೇಶ."

ಆದರೆ ದುರದೃಷ್ಟವಶಾತ್, ಬೇಡನ್ ಪೊವೆಲ್‌ಗೆ ಮೂರು ವರ್ಷ ವಯಸ್ಸಾಗಿದ್ದಾಗ ತಂದೆ ಮರಣ ಹೊಂದಿದರು. ತಾಯಿಯೇ ಮನೆಯಲ್ಲಿ ವಿದ್ಯಾಭ್ಯಾಸ ಮಾಡಿಸಿದಳು. ತಂದೆಯ ಮರಣಾನಂತರ ಮಗುವಿನ ಪೋಷಣೆ ಮತ್ತು ಶಿಕ್ಷಣಾ ವಿಷಯಗಳಲ್ಲಿ ಅನೇಕರು ಸಹಾಯ ಮಾಡಿದರು. ಸೇತುವೆಗಳನ್ನು ಕಟ್ಟುವುದರಲ್ಲಿ ಹೆಸರಾಂತವಾಗಿದ್ದ ರಾಬರ್ಟ್ ಸ್ಟೀವನ್‌ಸನ್ ಅವರು ಪೊವೆಲ್‌ನನ್ನು ಸಾಕುತ್ತಿದ್ದರು. ಬೇಡನ್ ಪೊವೆಲ್ ಚಿತ್ರಗಳನ್ನು ಬರೆಯುತ್ತಿದ್ದುದನ್ನು ನೋಡಿ ಜಾನ್ ರಸ್ಕಿನ್ ಎಂಬ ಪ್ರಸಿದ್ಧ ಕಲಾಶಾಸ್ತ್ರ ಪಂಡಿತರು ಅದನ್ನೇ ಅಭಿವೃದ್ಧಿ ಮಾಡಲು ಪ್ರೋತ್ಸಾಹಿಸಬೇಕೆಂದು ತಾಯಿಗೆ ಹೇಳಿದರು. ಉತ್ತಮ ಗ್ರಂಥಕರ್ತನಾದ ಥ್ಯಾಕರೆಯವರೂ ಈ ಹುಡುಗನ ವಿಷಯದಲ್ಲಿ ಹೆಚ್ಚು ಶ್ರದ್ಧೆಯನ್ನು ವಹಿಸಿದ್ದರು.

ಮನೆಯಲ್ಲಿ ಐದಾರು ಮಕ್ಕಳಿಗೆ ಬೇಡನ್ ಪೊವೆಲ್‌ನ ತಾಯಿಯು ಹೊಟ್ಟೆಬಟ್ಟೆಗೆ ಹವಣಿಸಲು ಆಕೆಯ ಗಂಡನು ಹೆಚ್ಚಾಗಿ ಆಸ್ತಿಯನ್ನೇನೂ ಬಿಟ್ಟಿರಲಿಲ್ಲ. ಮಕ್ಕಳು ತಮ್ಮ ಜೀವನೋಪಾಯವನ್ನು ಮಾಡಿಕೊಳ್ಳಲು ತಕ್ಕ ವಿದ್ಯೆಯನ್ನು ಕಲಿಯಬೇಕಾಗಿತ್ತು. ಆದ್ದರಿಂದ ಬೇಡನ್ ಪೊವೆಲ್ ರಜಾ ಕಾಲದಲ್ಲಿ ಮನೆಗೆ ಬಂದಾಗ ಬಹಳ ಕಷ್ಟಪಟ್ಟು ದುಡಿಯಬೇಕಾಗಿತ್ತು. ಸಣ್ಣ ವಯಸ್ಸಿನಲ್ಲಿಯೇ ಇವರ ನೈಪುಣ್ಯವೂ, ಜಾಣತನವೂ ಪ್ರದರ್ಶನಕ್ಕೆ ಬರುತ್ತಿದ್ದವು.

ಹನ್ನೊಂದು ವರ್ಷಗಳಾದ ಮೇಲೆ ಇವರನ್ನು ಪ್ರಾಥಮಿಕ ಶಾಲೆಗೆ ಸೇರಿಸಿದರು. ಆ ಶಾಲೆಯನ್ನು ಬಿಟ್ಟಾಗ ಅಲ್ಲಿನ ಮುಖ್ಯೋಪಾಧ್ಯಾಯರು ಅವನ ತಾಯಿಯೊಡನೆ 'ನಡತೆಯ ವಿಷಯದಲ್ಲಿ ನಿಮ್ಮ ಮಗನಿಂದ ಈ ಶಾಲೆಯ ಬಾಲಕರ ಮೇಲೆ ಬಹು ಒಳ್ಳೆಯ ಪರಿಣಾಮವಾಗಿರುವುದು. ಆದ ಕಾರಣ ದುಡ್ಡನ್ನು ತೆಗೆದುಕೊಳ್ಳದೆ ಸಂತೋಷವಾಗಿ ಅವನನ್ನು ಶಾಲೆಯಲ್ಲಿ ನಾನು ಇಟ್ಟುಕೊಂಡಿರುತ್ತಿದ್ದೆನು' ಎಂದು ಹೇಳಿದರು. ಕಾಲವನ್ನು ವ್ಯರ್ಥವಾಗಿ ಕಳೆಯದೆ ಬೇಡನ್ ಪೊವೆಲ್ ಸದ್ವ್ಯಾಸಂಗದಲ್ಲಿ ನಿರತರಾಗಿ ಮುಂದಿನ ಶಾಲೆಗೆ ಪ್ರವೇಶ ವೇತನವನ್ನು ಸಂಪಾದಿಸಿದರು.

ಬೇಡನ್ ಪೊವೆಲ್ ಅಣ್ಣನಾದ ವಾರ್ರಿಂಗ್‌ಟನ್ ನಾವಿಕ ಸೈನ್ಯದಲ್ಲಿದ್ದರು. ಅವರು ಜಲಯಾನದಲ್ಲಿ ತಮ್ಮ ತಮ್ಮಂದಿರಿಗೆ ಚೆನ್ನಾಗಿ ಶಿಕ್ಷಣವನ್ನು ಕೊಡುತ್ತಿದ್ದರು. ಅಣ್ಣತಮ್ಮಂದಿರು ಎಂತಹ ಅಪಾಯ ಕಂಡು ಬಂದರೂ ಅಂಜದೆ ಧೈರ್ಯವಾಗಿ ಪ್ರಯಾಣ ಮಾಡುತ್ತಿದ್ದರು. ಇದಕ್ಕೆ ಅವರ ತಾಯಿಯು ಅಡ್ಡಿ ಬರುತ್ತಿರಲಿಲ್ಲ. ಮಕ್ಕಳಿಗೆ ಧೈರ್ಯ ಬರಲೆಂದು ಪ್ರೋತ್ಸಾಹ ಕೊಡುತ್ತಿದ್ದರು.

## ವಿದ್ಯಾಭ್ಯಾಸ

ಗುಂಗುರು ಕೂದಲುಗಳು, ಥಳಥಳಿಸುವ ಕಣ್ಣು, ದೃಷ್ಟಿಯಿಂದಲೇ ಒಡನಾಡಿಗಳನ್ನು ಆಕರ್ಷಿಸುವ ಶಕ್ತಿ, ವಯಸ್ಸಿಗೆ ಸರಿಯಾದ ಎತ್ತರ ಇವುಗಳನ್ನುಳ್ಳ ರಾಬರ್ಟ್

ಬೇಡನ್ ಪೊವೆಲ್ ತಮ್ಮ ಹದಿಮೂರನೆಯ ವಯಸ್ಸಿನಲ್ಲಿ (೧೮೭೦) ಚಾರ್ಟರ್ ಹೌಸ್ ಶಾಲೆಗೆ ಸೇರಿದರು.

**ಈ ಶಾಲೆಯಲ್ಲಿ** ಬೇಡನ್ ಪೊವೆಲ್‌ರಿಗೆ ಡಾ। ಹೇಗ್ ಬ್ರೌನ್ ಎಂಬ ಮುಖ್ಯೋಪಾಧ್ಯಾಯರ ಆಶ್ರಯ ದೊರೆಯಿತು. ಪಾಠಶಾಲೆ ಅಭಿವೃದ್ಧಿಯಾಗಬೇಕಾದರೆ ಅದನ್ನು ಜನಸಂದಣಿಗಳುಳ್ಳ ಪಟ್ಟಣಗಳಿಂದ ತಪ್ಪಿಸಿ, ಹಳ್ಳಿಗಳ ಕಡೆಗೆ ಬದಲಾಯಿಸಬೇಕೆಂದು ಡಾ। ಬ್ರೌನ್ ನಿರ್ಧರಿಸಿದರು. ಮುಂದೆ ಪರಂಪರೆಯಾಗಿ ಬರುವ ವಿದ್ಯಾರ್ಥಿಗಳ ಆರೋಗ್ಯವನ್ನೂ ಕ್ಷೇಮವನ್ನೂ ದೃಷ್ಟಿಯಲ್ಲಿಟ್ಟು, ಮೇಲಿನ ಅಧಿಕಾರಿಗಳಿಂದ ಮೊದಲು ಬಹಳವಾಗಿ ಅಡ್ಡಿಬಂದರೂ ಅವರು ಒಪ್ಪುವಂತೆ ಮಾಡಿ, ಗೊಡಾಲ್ಮಿಂಗ್ ಎಂಬ ಸ್ಥಳದಲ್ಲಿ ಶಾಲೆಯನ್ನು ಕಟ್ಟುವಂತೆ ಏರ್ಪಾಟು ಮಾಡಿದರು.

ಬೇಡನ್ ಪೊವೆಲ್ ತಮಗಿಂತ ದೊಡ್ಡವರಾದವರಿಗೆ ಎಲ್ಲರಿಗಿಂತ ಮಿಗಿಲಾಗಿ ವಿತರಣೆಯಿಂದಲೂ ಸಂತೋಷದಿಂದಲೂ ಸೇವೆಮಾಡುತ್ತಿದ್ದರು. ಅವರು ಶಾಲೆಯಲ್ಲಿರುವ ಪರ್ಯಂತವೂ ಬಾಲಕರನ್ನು ಸನ್ಮಾರ್ಗಕ್ಕೆ ತಿರುಗಿಸಲು ಅವರ ಮನಃ ಪ್ರೇರಕನಾಗಿದ್ದರು. ಅವರು ತನ್ನ ಪಾಠಗಳಲ್ಲಿ ಅಂತಹ ಮೇಲ್ತರದ ಚಾತುರ್ಯವನ್ನೇನೂ ತೋರಲಿಲ್ಲ. ಹೀಗೆಂದು ಕೇವಲ ಆಟಗಳಲ್ಲಿಯೇ ಮಗ್ನನಾಗಿಯೂ ಇರಲಿಲ್ಲ. ಇವರು ಒಂದು ಕ್ಷಣವಾದರೂ ವ್ಯರ್ಥ ಕಾಲಕ್ಷೇಪ ಮಾಡುತ್ತಿರಲಿಲ್ಲ. ಇವರು ಹುಡುಗನಿದ್ದಾಗ ಕ್ರಿಕೆಟ್, ಫುಟ್‌ಬಾಲ್. ದೋಣಿಯನ್ನು ನಡೆಸುವುದು, ಈಜುವುದು ಇವೇ ಮೊದಲಾದ ಹಲವು ಅಂಗ ಸಾಧನೆಗಳನ್ನು ಮಾಡುತ್ತಿದ್ದರು.

ಪಾಠಶಾಲೆಯಲ್ಲಿ ತಾವು ಹಿರಿಮಣಿಯಾದಾಗ ತಮ್ಮ ಕರ್ತವ್ಯವನ್ನು ಬಹು ನಿಷ್ಠೆಯಿಂದ ಮಾಡುತ್ತಿದ್ದರು. ಇದಕ್ಕಾಗಿ ಮುಖ್ಯೋಪಾಧ್ಯಾಯರಿಗೆ ಇವರನ್ನು ಕಂಡರೆ ಬಹು ಮೆಚ್ಚು. 'ಈ ಜವಾಬ್ದಾರಿಯ ಸ್ಥಾನದಲ್ಲಿ ತನ್ನ ಕೆಲಸವನ್ನು ವಿವೇಕದಿಂದಲೂ, ಭಕ್ತಿಯಿಂದಲೂ ಬೇಡನ್ ಪೊವೆಲ್ ನಡೆಸುತ್ತಿದ್ದನು. ತನಗಿಂತ ಸಣ್ಣವರಾದ ಬಾಲಕರನ್ನು ಕಂಡರೆ ದಯೆ ತೋರಿಸುತ್ತಾ ಅವರಿಗೆ ಉದಾರ ಹೃದಯದಿಂದ ಪ್ರೋತ್ಸಾಹ ಕೊಡುತ್ತಿದ್ದನು. ಅವನು ಸೇರಿದ್ದ ಪಂಗಡದಲ್ಲಿ ಇಂದಿಗೂ ಅವನ ಸ್ಮರಣೆ ಚಿರಸ್ಥಾಯಿಯಾಗಿದೆ' ಎಂದು ಮುಖ್ಯೋಪಾಧ್ಯಾಯರು ಅಭಿಪ್ರಾಯಪಟ್ಟಿದ್ದಾರೆ.

ಯಾವುದಾದರೊಂದು ದೊಡ್ಡ ಪಟ್ಟಣಕ್ಕೆ ಹೋದರೆ ಅನುಮತಿ ಪಡೆದು ಅಲ್ಲಿನ ದೊಡ್ಡ ಕಾರ್ಖಾನೆಗಳನ್ನು ಅವರು ನೋಡಿಕೊಂಡು ಬರುತ್ತಿದ್ದರು. ಉಣ್ಣೆಯಿಂದ ಬಟ್ಟೆಯನ್ನೂ, ಮರದ ತುಂಡುಗಳಿಂದ, ಕಾಗದಗಳನ್ನೂ, ಕಲ್ಲುಗುಂಡುಗಳಿಂದ ಕಬ್ಬಿಣವನ್ನೂ ಹೇಗೆ ಮಾಡುವರೆಂದು ವಿಚಾರಿಸಿ ತಾವೇ ನೋಡಿ ತಿಳಿದುಕೊಳ್ಳುತ್ತಿದ್ದರು. ಯಂತ್ರಗಳು ಕೆಲಸ ಮಾಡುವುದನ್ನೂ, ವಿದ್ಯುಚ್ಛಕ್ತಿಯನ್ನು ಹೇಗೆ ಉಪಯೋಗಿಸುತ್ತಾರೆಂಬುದನ್ನೂ ವಿವರವಾಗಿ ಕೇಳಿ ನೋಡಿ ಅರಿತುಕೊಳ್ಳುತ್ತಿದ್ದರು.

ಬಾಲಚಮೂ ಚಳುವಳಿ (ಬಾಯ್ ಸ್ಕೌಟ್ ಮೂವ್‌ಮೆಂಟ್) ಆಲೋಚನೆಯು ಮೊದಲು ತಲೆದೋರಿದುದು ಮೇಫ್‌ಕಿಂಗ್‌ನಲ್ಲಲ್ಲ, ಐವತ್ತು ವರ್ಷಗಳ ಹಿಂದೆ ಚಾರ್ಟರ್ ಹೌಸ್ ಪಾಠಶಾಲೆಯಲ್ಲಿ ಇವರು ಅಭ್ಯಾಸ ಮಾಡುತ್ತಿದ್ದಾಗಲೇ ಈ ಚಳುವಳಿಯ ಅಂಕುರಾರ್ಪಣೆಯಾಯಿತೆಂದು ದೃಢವಾಗಿ ಹೇಳಬಹುದು.

೧೮೭೬ನೇ ಇಸವಿಯಲ್ಲಿ ಈ ಪಾಠಶಾಲೆಯನ್ನೂ ಅವರು ಬಿಟ್ಟರು. ನಂತರ ಅವರು ಎಲ್ಲಾ ಸಂದರ್ಭಗಳಲ್ಲಿಯೂ ಬೋಧಿಸುತ್ತಿದ್ದ ಒಂದು ಮುಖ್ಯ ವಿಷಯವನ್ನು ಅವರು ಕಲಿತದು ಇಲ್ಲಿಯೇ: **"ಇತರರಿಗೆ ಉಪಕಾರ ಮಾಡುವುದೇ ಮನುಷ್ಯನ ಅತ್ಯುತ್ತಮ ಕರ್ತವ್ಯ ಮತ್ತು ಜೀವನದ ನಿಜವಾದ ಆನಂದ"**. ಆದ್ದರಿಂದಲೇ ಆ ಶಾಲೆಯ ವಿಷಯದಲ್ಲಿ ಅವರಿಗೆ ಎಂದೂ ಬಹಳ ಅಭಿಮಾನ.

## ಸೈನ್ಯದಲ್ಲಿ ಸೇವೆ

ಚಾರ್ಟರ್ ಹೌಸ್ ಶಾಲೆಯನ್ನು ಬಿಟ್ಟಾಗ ಬೇಡನ್ ಪೊವೆಲ್‌ರಿಗೆ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯವನ್ನು ಸೇರಬೇಕೆಂಬ ಆಶೆ. ಆದರೆ ಇದಕ್ಕೆ ಅಡ್ಡಿಯಾಗಿ ಒಂದು ಸಂದರ್ಭ ಬಂದೊದಗಿತು. ಇದರಿಂದ ಇವರ ಜೀವನದ ಕ್ರಮವೇ ಬದಲಾಯಿಸಿತು. ಆ ಸಮಯಕ್ಕೆ ಸರಿಯಾಗಿ ಸೈನ್ಯಕ್ಕೆ ಜನಗಳನ್ನಾರಿಸಲು ಒಂದು ಪರೀಕ್ಷೆ ನಡೆಯುತ್ತ

ದೆಂಬ ಪ್ರಕಟಣೆ ಇವರ ಕಣ್ಣಿಗೆ ಬಿತ್ತು. ತಾವು ತೇರ್ಗಡೆಯಾಗುವೆನೆಂಬ ಧೈರ್ಯ ತಮಗಿಲ್ಲದಿದ್ದರೂ, ಅದೃಷ್ಟವಿದ್ದಂತಾಗಲೆಂದು ಪ್ರಯತ್ನಿಸಿದರು. ಪರೀಕ್ಷೆಗೆ ಬಂದಿದ್ದ ಏಳುನೂರು ಜನರೊಳಗೆ ಕುದುರೆ ಸವಾರ ಪಡೆಯ ಪರೀಕ್ಷೆಯಲ್ಲಿ ಎರಡನೆಯವರಾಗಿಯೂ, ಕಾಲಾಳು ಪಡೆಯ ಪರೀಕ್ಷೆಯಲ್ಲಿ ನಾಲ್ಕನೆಯವರಾಗಿಯೂ ಉತ್ತೀರ್ಣರಾದರು. ಈ ಪರೀಕ್ಷೆಯಲ್ಲಿ ತೇರ್ಗಡೆಯಾದವರನ್ನೂ ಸ್ಯಾಂಡ್‌ಹರ್ಸ್ಟ್ ಎಂಬ ಸ್ಥಳಕ್ಕೆ ಎರಡು ವರ್ಷಗಳ ಕಾಲ ಸರಿಯಾದ ಶಿಕ್ಷಣ ಪಡೆಯಲು ಹಾಕಿದರು. ಆದರೆ ಮೊದಲ ಆರು ಸ್ಥಾನಗಳೊಳಗಿದ್ದವರಿಗೆ ಮಾತ್ರ ಈ ಶಿಕ್ಷಣದ ಅಗತ್ಯವೇನೂ ಇರಲಿಲ್ಲ. ಆದ್ದರಿಂದ ಬೇಡನ್ ಪೊವೆಲ್‌ರಿಗೆ ಒಡನೆಯೇ ಸೈನ್ಯದಲ್ಲಿ ಅಧಿಕಾರ ದೊರಕಿತು.

ಇದುವರೆಗಂತೂ ಬೇಡನ್ ಪೊವೆಲ್‌ರಿಗೆ ತಮ್ಮ ವಿದ್ಯಾಭ್ಯಾಸಕ್ಕಾಗಿ ಕೈಯಿಂದ ಏನೂ ವೆಚ್ಚವಾಗಿರಲಿಲ್ಲವೆಂದೇ ಹೇಳಬೇಕು. ಈಗಲಾದರೋ ತಾನು ಸೇರಿರುವ ಉದ್ಯೋಗವು ಬಹು ವೆಚ್ಚಕ್ಕೆ ಮಾರ್ಗವಾದುದಾಗಿತ್ತು. ಆದರೂ ತನ್ನ ಮನೆಯವರ ಮೇಲೆ ಸಾಧ್ಯವಾದ ಮಟ್ಟಿಗೂ ಹೆಚ್ಚು ಹೊರೆ ಹಾಕಬಾರದೆಂದೇ ಅವರು ಮನಸ್ಸು ಮಾಡಿದರು. ತಮ್ಮ ವರಮಾನಕ್ಕಿಂತ ಹೆಚ್ಚಾಗಿ ವೆಚ್ಚ ಮಾಡಬಾರದೆಂದು ನಿರ್ಧರಿಸಿದರು. ತಮ್ಮ ೧೯ನೇ ವಯಸ್ಸಿನಲ್ಲಿ ಭಾರತ ದೇಶಕ್ಕೆ ಪ್ರಯಾಣ ಮಾಡಿದ ಬೇಡನ್ ಪೊವೆಲ್ ಹಡಗಿನ ಪ್ರಯಾಣದಲ್ಲಿ ನಡೆದ ವಿಷಯಗಳನ್ನು ಕುರಿತು ತಮ್ಮ ತಾಯಿಗೆ ಬರೆದ ಪತ್ರವೊಂದರಲ್ಲಿ ಹೀಗೆ ಹೇಳಿದ್ದಾರೆ:

"ಬೆಳಿಗ್ಗೆ ಏಳು ಘಂಟೆಗೆ ಎದ್ದು ನಿಲುವಂಗಿಯನ್ನೂ, ಜೋಡನ್ನೂ ಹಾಕಿಕೊಂಡು ಬಚ್ಚಲು ಮನೆಗೆ ಹೋಗಿ, ನನ್ನ ಸರದಿಯು ಬಂದಾಗ ಸ್ನಾನಮಾಡುವೆನು. ಎಂಟೂವರೆ ಘಂಟೆಯವರೆಗೂ ಹಿಂದೂಸ್ಥಾನಿ ಭಾಷೆಯನ್ನು ಅಭ್ಯಾಸ ಮಾಡುವೆನು. ಅನಂತರ ಉಪಹಾರವಾಗುವುದು. ೧೦.೨೦ಕ್ಕೆ ಕವಾಯತಾಗುವುದು, ೧೧ ಘಂಟೆಯಿಂದ ೧೨ ಘಂಟೆಯವರೆಗೆ ಬ್ಯಾಂಡ್ ಬಾರಿಸುವುದನ್ನು ಕೇಳುತ್ತಾ ಕೂರುವೆನು, ಮಧ್ಯಾಹ್ನ ಫಲಾಹಾರವಾದ ಮೇಲೆ ಕೆಲವು ಕಸರತ್ತುಗಳನ್ನು ಮಾಡುವೆನು. ೪.೩೦ಕ್ಕೆ ಊಟ, ಆ ಮೇಲೆ ಆರು ಘಂಟೆಗೆ ಪದ ಹಾಡುವುದನ್ನು ಕೇಳುತ್ತಿದ್ದು. ಎಂಟು ಘಂಟೆಗೆ ಚಹಾ ಜೊತೆಗೆ ತಿಂಡಿಯನ್ನು ತೆಗೆದುಕೊಂಡು ಸ್ವಲ್ಪಹೊತ್ತು ಮಾತನಾಡುತ್ತಿದ್ದು ಆ ಮೇಲೆ ಮಲಗುವೆನು"—

ಹೀಗೆ ಕೆಲವು ವಾರಗಳು ಪ್ರಯಾಣಮಾಡಿ ಮುಂಬೈಯನ್ನು ಸೇರಿದರು. ಆಗ ಭಾರತದಲ್ಲಿ ಸಿಪಾಯಿ ದಂಗೆಯಾಗಿ ಇಪ್ಪತ್ತು ವರ್ಷಗಳ ಕಾಲವಾಗಿತ್ತು. ಅವರ ಸೈನ್ಯದ ಕಚೇರಿಯು ಲಕ್ನೋ ಪಟ್ಟಣದಲ್ಲಿತ್ತು. ಅಲ್ಲಿ ಬೇಡನ್ ಪೊವೆಲರನ್ನು ಸಬ್ ಲೆಫ್ಟಿನೆಂಟಾಗಿ ತೆಗೆದುಕೊಂಡರು. ಭಾರತದಲ್ಲಿದ್ದಾಗ ಸಂಗೀತಗಾರರೆಂದೂ, ಅಭಿನಯಕಾರರೆಂದೂ ಎಲ್ಲರೂ ಇವರನ್ನು ಉಪಚರಿಸುತ್ತಿದ್ದರು.

ಭಾರತದಲ್ಲಿ ಮೂರು ವರ್ಷಗಳು ಕಳೆದಮೇಲೆ ಅವರಿಗೆ ಇಲ್ಲಿನ ಹವೆಯಿಂದ ಕಾಯಿಲೆ ಬಂತು. ಇಲ್ಲಿ ನಡೆದ ಪರೀಕ್ಷೆಗೆ ಬಹು ಕಷ್ಟಪಟ್ಟು ಸಿದ್ಧಮಾಡಿಕೊಂಡು, ಜ್ವರ ಬರುತ್ತಿದ್ದರೂ ಪರೀಕ್ಷೆ ಕೊಟ್ಟು, ಅದರಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿದರು. ಕೈ ಕೆಸರಾದರೆ ಬಾಯಿ ಮೊಸರು, ಕಷ್ಟಕ್ಕೆ ತಕ್ಕ ಫಲ ಇದ್ದೇ ಇರುವುದೆಂಬುದನ್ನು ದೃಢಪಡಿಸಲು ಅವರಿಗೆ ಅಧಿಕಾರದಲ್ಲಿ ಹೆಚ್ಚು ಪ್ರೋತ್ಸಾಹವು ದೊರಕಿತು. ಅಂತೂ ಭಾರತಕ್ಕೆ ಬಂದು ಸರಿಯಾಗಿ ಎರಡು ವರ್ಷಗಳಾಗುತ್ತಲೇ ಕಾಯಿಲೆಯ ದೆಸೆಯಿಂದ ಇಂಗ್ಲೆಂಡಿಗೆ ಹಿಂತಿರುಗಿದರು.

ಮತ್ತೆ ಒಂದೂವರೆ ವರ್ಷವಾದ ಮೇಲೆ ಬೇಡನ್ ಪೊವೆಲ್ ಪುನಃ ಭಾರತಕ್ಕೆ ಬಂದರು. ಈ ಸಲ ಅವರು ಬಂದಾಗ ಅವರು ಸೇರಿದ್ದ ಸೈನ್ಯವು ಅಫ್ಘಾನಿಸ್ಥಾನದ ಕಾಂದಹಾರ್‌ನಲ್ಲಿ ಯುದ್ಧಕ್ಕೆ ಹೊರಡುವಂತೆ ಅಪ್ಪಣೆಯಾಗಿತ್ತು. ಇದೇ ವರ್ಷದಲ್ಲಿಯೇ ಪ್ರಸಿದ್ಧ ದಳಪತಿಯಾದ ರಾಬರ್ಟ್ಸ್ ಬಹು ಕಷ್ಟನಷ್ಟಗಳನ್ನು ಅನುಭವಿಸಿ ಅಫ್ಘಾನರನ್ನು ಸೋಲಿಸಿದರು. ಬೇಡನ್ ಪೊವೆಲ್ ಲಕ್ನೋವಿಗೆ ಬಂದು ಸೇರಿದಾಗ ಸೈನ್ಯವು ಆಗಲೇ ಅಫ್ಘಾನಿಸ್ಥಾನಕ್ಕೆ ಹೊರಟುಬಿಟ್ಟಿತ್ತು. ಬೇಡನ್ ಪೊವೆಲ್ ಕೆಲವರೊಡನೆ ಬೇಗ ಹೋಗಿ ಆ ಸೈನ್ಯವನ್ನು ಕೊಕೋರಾನ್ ಎಂಬಲ್ಲಿ ಸೇರಿದರು.

ಕೊಕೋರಾನಿಗೆ ಸೇರಿದ ತರುವಾಯ ಬೇಡನ್ ಪೊವೆಲ್ ಮುಖ್ಯ ಸೇನಾಧಿಕಾರಿಗಳಿಗೋಸ್ಕರ ಯುದ್ಧ ಭೂಮಿಯ ನಕ್ಷೆಯನ್ನು ಬರೆದುಕೊಟ್ಟರು. ಇದರಿಂದ ಅವರ ಕೀರ್ತಿಯು ಬಹುವಾಗಿ ಬೆಳೆಯಿತು.

ಬೇಡನ್ ಪೊವೆಲ್ ಜಾಡುಪತ್ತೆ ಮಾಡುವುದನ್ನು (Tracking) ಮೊದಲು ನಡೆಸಿದ್ದು ಕಾಂದಹಾರ್‌ನಲ್ಲಿಯೇ. ಇವರ ಮೇಲ್ಪಟ್ಟ ಅಧಿಕಾರಿಯು ಇದಕ್ಕಾಗಿ ಇವರನ್ನು ಬಹಳ ಹೊಗಳಿದನು. ಬೇಡನ್ ಪೊವೆಲ್ ಅಧಿಕಾರದಲ್ಲಿ ಬಡ್ತಿ ಹೊಂದುವುದಕ್ಕೂ ಇದು ಸಹಾಯವಾಯಿತು.

## ಕೇಪ್ ಟೌನಿನಲ್ಲಿ

ಆಫ್ರಿಕದಲ್ಲಿ ಯುದ್ಧವು ನಡೆಯುತ್ತಿತ್ತು. ಆಗ ಅಲ್ಲಿಗೆ ಬೇಡನ್ ಪೊವೆಲ್ ಸೈನ್ಯದೊಡನೆ ೧೮೮೪ರಲ್ಲಿ ಬಂದು ಸೇರಿದರು. ಈ ಮಧ್ಯೆ ಇವರ ಅಣ್ಣನಾದ ಜಾರ್ಜ್ ಸಹ ಬಂದರು. ಅವರು ಬೇಡನ್ ಪೊವೆಲ್‌ಗಿಂತ ಹತ್ತು ವರ್ಷ ದೊಡ್ಡವರು.

ಕವಣೆ ಎಸೆಯುವುದು, ಬೇಟೆಯ ಮೃಗದ ಹೆಜ್ಜೆಯನ್ನೂ, ಬೇಟೆಯ ಪ್ರಾಣಿಯನ್ನೂ ಹುಡುಕಿಕೊಂಡು ಹೋಗುವುದು ಇವು ಬೇಡನ್ ಪೊವೆಲ್‌ರ ವ್ಯಾಸಂಗಗಳಾಗಿದ್ದವು.

ಜರ್ಮನಿ, ರಷ್ಯ ಮೊದಲಾದ ದೇಶಗಳಲ್ಲಿ ಪ್ರಯಾಣಮಾಡಿಕೊಂಡು ಬೇಡನ್ ಪೊವೆಲ್ ಇಂಗ್ಲೆಂಡಿಗೆ ಹಿಂತಿರುಗಿದರು.

## ಡಿನಿಸೂಲನೊಡನೆ ಯುದ್ಧ

೧೮೮೮ರಲ್ಲಿ ಬೇಡನ್ ಪೊವೆಲ್ ತನ್ನ ಸೋದರಮಾವನಾದ ಜನರಲ್ ಸ್ಮಿತ್‌ಗೆ ಅಂಗರಕ್ಷಕನಾಗಿ ಮತ್ತೆ ದಕ್ಷಿಣ ಆಫ್ರಿಕಾಕ್ಕೆ ಹೋದರು. ಬಹು ಚಟುವಟಿಕೆಯ ಸ್ವಭಾವದವರಾದ ಬೇಡನ್ ಪೊವೆಲ್‌ಗೆ ಇದರಿಂದ ಪೂರ್ತಿಯಾಗಿ ವಿಶ್ರಾಂತಿಗೆ ಅವಕಾಶವಾದಂತಾಯಿತು. ಕೆಲಸವಿಲ್ಲದಾಗ ನಾಟಕದ ಅಭಿನಯಗಳಲ್ಲಿಯೂ, ಪೋಲೋ ಆಟ ಮತ್ತು ಬೇಟೆಮಾಡುವುದರಲ್ಲೂ ಕಾಲ ಕಳೆಯುತ್ತಿದ್ದರು.

ಹೀಗಿರುವಾಗ ಒಂದು ಸಂಗತಿ ನಡೆಯಿತು. ಪಕ್ಕದಲ್ಲಿ ಸೂಲೂ ದೇಶ (Zulu-land) ಇತ್ತು. ಈ ದೇಶದ ಜನಗಳು ಬಹಳ ಶೂರರು. ಅವರಲ್ಲಿ ಒಂದು ಪದ್ಧತಿ ಇರುವುದು. ಸೂಲೂ ಹುಡುಗನು ಯೋಧನೆನಿಸಿಕೊಳ್ಳಬೇಕಾದರೆ ಅವನಿಗೆ ಸುಮಾರು ೧೫-೧೬ ವರ್ಷ ವಯಸ್ಸಾಗಿರುವಾಗ ಅವನ ಉಡುಪನ್ನೆಲ್ಲಾ ಕಿತ್ತುಕೊಂಡು ಅವನ ಮೈಗೆಲ್ಲಾ ಒಂದು ವಿಧವಾದ ಬಿಳಿಯ ಬಣ್ಣವನ್ನು ಬಳಿಯುವರು. ಎಷ್ಟೇ ತೊಳೆದರೂ ಆ ಬಣ್ಣವು ಅಳಿಸಿ ಹೋಗುವುದಿಲ್ಲ. ಅವನ ಕೈಯಲ್ಲಿ ಎತ್ತಿನ ಚರ್ಮದ ಒಂದು ಗುರಾಣಿಯನ್ನು ಮಾತ್ರ ಕೊಟ್ಟು, ಬಣ್ಣವು ಪೂರ್ತಿಯಾಗಿ ಅಳಿಸಿ ಹೋಗುವವರೆಗೂ ಕಾಡಿನಲ್ಲಿಯೇ ಇರಬೇಕೆಂದು ವಿಧಿಸಿ ಕಳುಹಿಸಿ ಬಿಡುವರು. ಆ ಬಣ್ಣವಿರುವಾಗಲೇ ಅವನು ಯಾರ ಕೈಗಾದರೂ ಸಿಕ್ಕಿದರೆ ಅವನನ್ನು ಕೊಂದು ಬಿಡುವರು.

ತಿನ್ನುವುದಕ್ಕೆ ಆಹಾರವಿಲ್ಲದೆ, ಹೊದೆಯುವುದಕ್ಕೆ ಬಟ್ಟೆಯಿಲ್ಲದೆ ಇವನನ್ನು ಕಳುಹಿಸುವರು. ಈ ಹುಡುಗನು ಕಾಡಿನಲ್ಲಿ ತನ್ನ ಆಹಾರವನ್ನೂ, ಉಡುಪನ್ನೂ ಹವಣಿಸಿಕೊಳ್ಳಬೇಕು. ಬೆಂಕಿಯನ್ನು ಹೊತ್ತಿಸಲು ಬೆಂಕಿಯ ಕಡ್ಡಿಯಿಲ್ಲ. ಮರಗಳನ್ನು ಉಜ್ಜಿ ಬೆಂಕಿ ಮಾಡಿಕೊಳ್ಳಬೇಕು. ಆಹಾರಕ್ಕೆ ಯೋಗ್ಯವಾದ ಹಣ್ಣು ಹಂಪಲುಗಳು, ಗೆಡ್ಡೆಗೆಣಸುಗಳು ಯಾವುದೆಂಬುದನ್ನು ಅವನು ತಿಳಿದುಕೊಂಡಿರಬೇಕು. ಅಲ್ಲದೆ ಅಡಿಗೆ ಮಾಡಿಕೊಳ್ಳಲು ಬೇಕಾದ ಪಾತ್ರೆಗಳನ್ನು ಅಲ್ಲಿಯೇ ಮಾಡಿಕೊಳ್ಳುವುದನ್ನು ಅರಿತಿರಬೇಕು. ಇಷ್ಟೇ ಅಲ್ಲ. ಕಾಡು ಪ್ರಾಣಿಗಳ ಭಯವು ಬೇರೆ. ಅಲ್ಲದೆ ಯಾವ ಕ್ಷಣದಲ್ಲಿ ತನಗೆ ಬಣ್ಣವು ಇರುವಾಗ ಯಾರು ನೋಡಿಬಿಡುವರೋ ಎಂಬ ಭಯ. ಇಷ್ಟನ್ನೆಲ್ಲಾ ಸುಮಾರು ಒಂದು ತಿಂಗಳ ಕಾಲ ಸಹಿಸಿಕೊಂಡು ಬಣ್ಣವು ಪೂರ್ತಿಯಾಗಿ ಅಳಿಸಿ ಹೋದಮೇಲೆ ತನ್ನ ಹಳ್ಳಿಗೆ ಜಯಶೀಲನಾಗಿ ಹಿಂತಿರುಗಿದಾಗ ಅವನ ಗುಂಪಿನವರೆಲ್ಲಾ ಅವನನ್ನು ಸಂತೋಷದಿಂದ ಕರೆದುಕೊಳ್ಳುವರು. ಅಂದಿನಿಂದ ಆತನು ನಿಜವಾದ ಯೋಧನೆನಿಸಿಕೊಳ್ಳುವನು. ಒಳ್ಳೆಯ ಅಜ್ಞಾತವಾಸ! ತನ್ನ ಜೀವನವನ್ನೂ ತನ್ನ ಸಂರಕ್ಷಣೆಯನ್ನೂ ತಾನೇ ಸ್ವತಂತ್ರನಾಗಿ ಮಾಡಿಕೊಳ್ಳಬಲ್ಲನೆಂಬ ಯೋಗ್ಯತಾ ಪರೀಕ್ಷೆ ಸ್ಕೌಟಿನ ಯೋಗ್ಯತೆಯ ಸಾರ !

ಹಿಂದೆ ಸೂಲೂ ಯುದ್ಧವಾದ ಮೇಲೆ, ಸೂಲು ದೇಶವನ್ನು ಎಂಟು ತುಕಡಿಗಳಾಗಿ ವಿಭಾಗಿಸಿ ಒಂದೊಂದಕ್ಕೆ ಒಬ್ಬೊಬ್ಬ ನಾಯಕನನ್ನು ನೇಮಿಸಿದ್ದರು. ಈ ನಾಯಕರಲ್ಲೊಬ್ಬನಾದ ಡಿನಿಸೂಲು (Dinizulu) ಎಂಬಾತನು ಬ್ರಿಟಿಷರ ಮೇಲೆ ದಂಗೆಯೆದ್ದನು. ನಾಲ್ಕು ತುಕಡಿಯವರು ಇವನೊಡನೆ ಸೇರಿದರು. ಇಬ್ಬರು ಸುಮ್ಮನಿದ್ದರು. ಇಬ್ಬರು ಬ್ರಿಟಿಷರೊಡನೆ ಸೇರಿದರು. ಡಿನಿಸೂಲುವನ್ನು ಹಿಡಿಯಲು ದೇಶಿಯ ಪೋಲೀಸಿನವರು

ಇತರ ಸೈನ್ಯದೊಡನೆ ಅವನ ಪಾಳೆಯದ ಬಳಿಗೆ ಹೋದರು. ಹಗೆಗಳ ಸಂಖ್ಯೆ ಹೆಚ್ಚಾಗಿದ್ದುದರಿಂದ ಅವರು ಹಿಂದಕ್ಕೆ ಬರಬೇಕಾಗಿ ಬಂತು. ಡಿನಿಸೂಲಿನ ತಮ್ಮನ್ನು ಇದನ್ನು ನೋಡಿ ತಾನು ಒಂದು ಸೈನ್ಯವನ್ನು ಒಟ್ಟುಗೂಡಿಸಿಕೊಂಡು ಒಂದು ದೊಡ್ಡ ಬೆಟ್ಟದ ಮೇಲೆ ನಿಂತನು. ಆದರೆ ಅವನನ್ನು ಇವರು ಬೇಗ ಹಿಡಿಸಿದರು. ಇತರ ಕಡೆಗಳಲ್ಲಿಯೂ ದಂಗೆಗಳಾದವು.

ಈ ಗಂಡಾಂತರದ ಸಮಯದಲ್ಲಿ ಜನರಲ್ ಸ್ಮಿತ್ ಆ ಕಡೆಗೆ ತಕ್ಕಷ್ಟು ಸೈನ್ಯವನ್ನು ಕೊಟ್ಟು ಕಳುಹಿಸಿದನು. ಈ ಸೈನ್ಯದೊಡನೆ ಬೇಡನ್ ಪೊವೆಲ್ ಹೋದರು. ಬಹು ಕಷ್ಟದಿಂದ ಇವರು ಬ್ರಿಟಿಷ್ ಅಸಿಸ್ಟೆಂಟ್ ಕಮೀಷನರ್ ಪ್ರಿಟೋರಿಯಸ್ (Pretorias) ಇದ್ದ ಸ್ಥಳಕ್ಕೆ ಸುಮಾರು ಎಂಟು ಮೈಲಿಗಳ ದೂರದಲ್ಲಿ ಬಂದು ಇಳಿದು ಕೊಂಡರು. ಮುತ್ತಿಗೆ ಹಾಕಲ್ಪಟ್ಟಿದ್ದವರೊಡನೆ ಮಾತ ನಾಡಿಕೊಂಡು ಬರುವಂತೆ ಕತ್ತಲೆಯಾದ ಮೇಲೆ ಒಬ್ಬ ಬೇಹುಗಾರನನ್ನು ಕಳುಹಿಸಿದರು. ಇವನು ಬೆಳಗಿನ ಜಾವ ಎರಡು ಗಂಟೆಗೆ ಜಯಹೊಂದಿ ತಿರುಗಿಬಂದನು. ತನ್ನ ಜನಗಳು ಸೌಖ್ಯದಿಂದಿರುವುದಾಗಿ ತಿಳಿಸಿ ಹಗೆಗಳ ದಂಡೊಂದು ಬಹಳ ಹತ್ತಿರವೇ ಇಳಿದುಕೊಂಡಿರುವು ದೆಂದು ಎಚ್ಚರಿಸಿ ಅವನೊಡನೆ ಪ್ರಿಟೋರಿಯಸ್ ಒಂದು ಪತ್ರವನ್ನು ಬರೆದು ಕಳುಹಿಸಿದ್ದನು. ಆದರೆ ಮಾರನೆಯ ದಿನ ಇವರು ಹೋದಾಗ ಹಗೆಗಳಾರೂ ಕಂಡುಬರಲಿಲ್ಲ. ಒಳಗಿದ್ದವರು ಉಪಾಯದಿಂದ ಬಲವಾದ ಒಂದು ಸಣ್ಣ ಕೋಟೆಯನ್ನು ಕಟ್ಟಿಕೊಂಡಿದ್ದರು. ಇದರ ಸುತ್ತಲೂ ಒಂದು ಕಂದಕ ಮತ್ತು ಎತ್ತರವಾದ, ಬಲವಾದ ಮುಳ್ಳಿನ ಬೇಲಿ. ಈ ರೀತಿ ಏರ್ಪಾಡು ಮಾಡಿಕೊಂಡು ಹಗೆ ಗಳಿಂದ ತಪ್ಪಿಸಿಕೊಳ್ಳಲು ಬೇಡನ್ ಪೊವೆಲ್‌ರೊಡನೆ ಬಂದಿದ್ದ ಸೈನ್ಯವು ಸಹಾಯ ಮಾಡಿತು. ಮತ್ತೊಂದು ಕೋಟೆಯನ್ನು ಕಟ್ಟಲು ಪ್ರಯತ್ನ ನಡೆಯಿತು. ಪದಾತಿ ಗಳನ್ನು ಬಿಟ್ಟು ಬಿಟ್ಟು ಸವಾರರ ಸೈನ್ಯವು ಹಿಂತಿರುಗಲು ಹೊರಟಿತು. ಒಡನೆಯೇ ಪಕ್ಕದಲ್ಲಿದ್ದ ಗುಡ್ಡಗಳ ಮೇಲೆ ಹಗೆಗಳ ಕಾವಲುಗಾರರು ಕಾದಿರುವರೆಂದು ವರ್ತಮಾನವು ಬಂತು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ದಟ್ಟವಾದ ಹೊಗೆಯೂ ಕಾಣಿಸಿತು. ತುಪಾಕಿಯ ಶಬ್ದವೇನೂ ಕೇಳಿಸಲಿಲ್ಲ. ಶತ್ರು ಸೈನ್ಯವು ಬಿಟ್ಟು ಓಡಿ ಹೋಗಿತ್ತೆಂದು ವ್ಯಕ್ತವಾಯಿತು. ಹೊಸ ಕೋಟೆಯ ಕಟ್ಟಡದ ಕೆಲಸ ವನ್ನು ಸೈನ್ಯದವರು ಕೈಗೊಂಡರು. ಈ ವಿಚಿತ್ರವಾದ ಕೋಟೆಯನ್ನು ಕಟ್ಟುವುದಕ್ಕೆ ಮೆಕ್ಕೀನ್ (Meckean) ಮತ್ತು ಬೇಡನ್ ಪೊವಲ್ ಅವರೇ ಮಾದರಿಯನ್ನು ರಚಿಸಿಕೊಟ್ಟವರು. ಈ ಕೋಟೆಯು ಅಲ್ಲಿನ ಹಗೆಗಳಿಗೆ ಭೇದಿಸಲು ಅಸಾಧ್ಯವಾಗಿಯೂ, ಬಹು ಸ್ವಲ್ಪ ಜನರೇ ರಕ್ಷಿಸಿಕೊಳ್ಳಬಹುದಾಗಿಯೂ ಇತ್ತು.

ಸಹಾಯಕ್ಕೆ ಬಂದಿದ್ದ ದಂಡಿನವರು ಹಿಂತಿರುಗಿ ಹೊರಟಾಗ ವೈದ್ಯನನ್ನು ಈ ಕೋಟೆಯಲ್ಲಿಯೇ ಬಿಟ್ಟು ಬಿಟ್ಟರು. ಆದ್ದರಿಂದ ಕಾಯಿಲೆಯವರಿಗೂ, ಗಾಯ ಪಟ್ಟವರಿಗೂ ಪ್ರಥಮ ಚಿಕಿತ್ಸೆಯನ್ನುಂಟುಮಾಡುವ ಹೊರೆಯು ಬೇಡನ್ ಪೊವೆಲ್‌ರ ಪಾಲಿಗೇ ಬಿತ್ತು. ಇಬ್ಬರು ವ್ಯಾಪಾರಿಗಳ ಗಾಯಗಳನ್ನು ಯಾರೂ ನೋಡಿಯೇ ಇರಲಿಲ್ಲ. ಮತ್ತೊಬ್ಬ ಹೆಂಗಸಿಗೆ ಆಮಶಂಕೆ ಮತ್ತು ಜ್ವರ; ಇನ್ನೊಬ್ಬನಿಗೆ ಹೊಟ್ಟೆಯಲ್ಲಿಯೇ ಗಾಯವಾಗಿತ್ತು. ಇವರೆಲ್ಲರಿಗೂ ಬೇಡನ್ ಪೊವೆಲ್ ಚಿಕಿತ್ಸೆಮಾಡಿದರು.

ಇದಾಗಿ ಒಂದು ವರ್ಷವಾದ ಮೇಲೆ ಸ್ಮಿತ್‌ನೊಡನೆ ತಮ್ಮ ದೇಶಕ್ಕೆ ಬೇಡನ್ ಪೊವೆಲ್ ಸಮುದ್ರ ಮಾರ್ಗ ವಾಗಿ ಪ್ರಯಾಣ ಮಾಡಿದರು.

ಈ ಯುದ್ಧದಲ್ಲಿ ಪಡೆದ ಜಯದಿಂದ ಮೆಕ್ಕೀನ ನಿಗೂ, ಬೇಡನ್ ಪೊವೆಲ್‌ಗೂ ಬಹು ಕೀರ್ತಿಯು ಬಂತು. ಇನ್ನು ಬೇಡನ್ ಪೊವೆಲ್ ಸುದ್ದಿಗಾರರ ಇಲಾಖೆ ಯೊಂದನ್ನು ಏರ್ಪಡಿಸಬೇಕಾಯಿತು. ಡಿನಿಸೂಲನನ್ನು ಹಿಡಿಯಬೇಕಾಗಿತ್ತು. ಅವನು ಇಳಿದುಕೊಂಡಿದ್ದ ಸ್ಥಳದ ಸುತ್ತಲೂ ಆವರಿಸಿಕೊಳ್ಳುವಂತೆ ಬ್ರಿಟಿಷ್ ಸೈನಿಕರಿಗೆ ಅಪ್ಪಣೆಯಾಯಿತು. ಸ್ಥಳ ಶೋಧನೆಗಾಗಿ ಬೇಡನ್ ಪೊವೆಲ್ ಸವಾರರೊಡನೆ ತಿರುಗಾಡುತ್ತಿದ್ದರು. ಹಗೆ ಗಳೊಡನೆ ಒಂದು ಸಣ್ಣ ಕದನವಾಯಿತು. ಬೇಡನ್ ಪೊವೆಲ್ ಕಷ್ಟಕ್ಕೆ ಸಿಕ್ಕಿಬಿದ್ದಿದ್ದರು. ಎಲ್ಲಿಯೂ ನಿಶ್ಶಬ್ದ ಏನೋ ಅನುಮಾನ. ಬೇಡನ್ ಪೊವೆಲ್‌ರಿಗೆ ಇದ್ದಕ್ಕಿದ್ದ ಹಾಗೆ ಸಂಶಯ ಹುಟ್ಟಿ, ಹಠಾತ್ತನೆ ಎದ್ದರು. ಕಾವಲಿನಲ್ಲಿದ್ದ ವರನ್ನೆಲ್ಲಾ ಎಬ್ಬಿಸಿದರು. ಶತ್ರುಗಳು ಇವರ ಮೇಲೆ ಬೀಳಲು ಮೆಲ್ಲಗೆ ತೆವಳಿಕೊಂಡು ಬರುತ್ತಿದ್ದರು. ಬೇಡನ್ ಪೊವೆಲ್ ಕಡೆಯವರು ಸುತ್ತಲೂ ತಿರುಗಾಡುತ್ತಿದ್ದುದನ್ನು ನೋಡಿ ಶತ್ರುಗಳು ಅವರಾಗಿಯೇ ಹಿಂತಿರುಗಿದರು.

[ಮುಂದುವರಿಯುವುದು]

ಸಂಕ್ಷೇಪಿಸಿದವರು:

**ಕೆ. ಬಿ. ರಾಜಶೇಖರ್**

# ಶಿರಾಲಿಯಲ್ಲಿ ದೀಕ್ಷಾ ಸಮಾರಂಭ

ಶಿರಾಲಿ ಜನತಾ ವಿದ್ಯಾಲಯದ ಕಾಂಪೋಸಿಟ್ ಜ್ಯೂನಿಯರ್ ಕಾಲೇಜಿನಲ್ಲಿ ಅದೇ ವಿದ್ಯಾಲಯದ ಸ್ಕೌಟ್ಸ್ ದಳದ ೩೨ ಹೊಸ ವಿದ್ಯಾರ್ಥಿಗಳಿಗೆ ಡಿ. ೧೭ರಂದು ಸಂಜೆ ೫ ಗಂಟೆಗೆ ದೀಕ್ಷಾ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಸ್ಥಳೀಯ ಭತ್ತದ ಗಿರಣಿಯ ಮಾಲೀಕರೂ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರೂ ಆದ ಶ್ರೀ ಕೆ. ವಿ. ಪ್ರಭು ಅವರ ಸಲಹೆಯಂತೆ ಶಿರಾಲಿ ಸಿಂಡಿಕೇಟ್ ಬ್ಯಾಂಕ್‌ನ ಶ್ರೀ ಶೆಣೈ ಅವರು ಅತಿಥಿಗಳಾಗಿ ಆಗಮಿಸಿದ್ದರು.

ಪ್ರಾರ್ಥನೆ, ಧ್ವಜವಂದನೆ ಮತ್ತು ಸ್ಕೌಟ್ಸ್ ಮಕ್ಕಳ ಪಥಸಂಚಲನದ ವಾದ್ಯ-ಮೇಳಗಳೊಂದಿಗೆ ಆಕರ್ಷಕ ರೀತಿಯಲ್ಲಿ ಅಧ್ಯಕ್ಷ ಮತ್ತು ಅತಿಥಿಗಳಿಗೆ ಗೌರವ ರಕ್ಷೆ ನೀಡಲಾಯಿತು. ಸ್ಥಳೀಯ ಕಾರ್ಯದರ್ಶಿ ಶ್ರೀ ಕೆ. ಎನ್. ತಿಗಡಿಯವರು ಹೂವಿನ ಹಾರ ಹಾಕಿ ಸ್ವಾಗತಿಸಿದರು. ದೀಕ್ಷಾ ನಿಯಮದಂತೆ ಸ್ಕೌಟನು ಗೌರವಾರ್ಹನು ಎಂಬ ಪ್ರತಿಜ್ಞಾ ಸಂಕೇತವನ್ನು ಎತ್ತಿಹಿಡಿದರು. ಆಗ ಅತಿಥಿಗಳು ಪ್ರತಿಜ್ಞಾವಿಧಿಯನ್ನು ನೆರವೇರಿಸಿದರು. ಕೋಮಲಪಾದದ ೩೨ ಬಿಲ್ಲೆಗಳನ್ನು ವಿದ್ಯಾರ್ಥಿಗಳಿಗೆ ನೀಡಿದರು. ದಳದ ಮುಖಂಡರಾದ ಕು| ದೀಪಕ್‌ಕಾಮತ್ ಮತ್ತು ಕು| ಶಶಿಧರ ನಾಯಕ್ ಅವರು ಹೊಸ ವಿದ್ಯಾರ್ಥಿಗಳನ್ನು ಪರಿಚಯಿಸಿದರು. ಶ್ರೀ ಶೆಣೈ ಅವರು ಶಿಸ್ತಿನ ಶಿಕ್ಷಣದ ಮಹತ್ವವನ್ನು ವಿವರಿಸಿದರು. ಶ್ರೀ ಪೈ ಅವರು ಸ್ವತಃ ತಾವು ವಿದ್ಯಾರ್ಥಿ ಜೀವನದಲ್ಲಿ ಸ್ಕೌಟ್ ಆಗಿದ್ದು ಆಗಿನ ಸೇವೆಯನ್ನು ಸ್ಮರಿಸಿಕೊಂಡು ವಿದ್ಯಾರ್ಥಿಗಳಿಗೆ ಹಿತ ನುಡಿದರು.

ಕೊನೆಯಲ್ಲಿ ಅಧ್ಯಕ್ಷರು, ಅತಿಥಿಗಳು ವಿದ್ಯಾರ್ಥಿಗಳಿಗೆ ಸಿಹಿ ಹಂಚಿದರು. ಕು| ಶಶಿಧರ ನಾಯಕ್ ವಂದನೆಯ ನಂತರ, ವಿದ್ಯಾರ್ಥಿಗಳು ಮನೋರಂಜಕ ಆಟಗಳನ್ನು ಆಡಿತೋರಿಸಿ ಅಧ್ಯಕ್ಷರ ಹಾಗೂ ಅತಿಥಿಗಳ ಮೆಚ್ಚುಗೆಯನ್ನು ಪಡೆದರು.

ರಾಷ್ಟ್ರಗೀತೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

# ರಾಷ್ಟ್ರೀಯ ಆಯುಕ್ತರಿಗೆ ವಿಶೇಷ ಅಂತರ್ರಾಷ್ಟ್ರೀಯ ಪ್ರಶಸ್ತಿ

ನಮ್ಮ ರಾಷ್ಟ್ರೀಯ ಆಯುಕ್ತ ಸರ್ದಾರ್ ಲಕ್ಷ್ಮಣ್ ಸಿಂಗ್ ಅವರಿಗೆ ವಿಶ್ವ ಸ್ಕೌಟಿಂಗ್‌ನ ವಿಶೇಷ ಪ್ರಶಸ್ತಿಯಾದ ''ಕಂಚು ತೋಳ'' ನೀಡಲಾಗಿದೆ.

ಜಿನಿವಾದಲ್ಲಿನ ವಿಶ್ವ ಗೌರವ ಮತ್ತು ಪ್ರಶಸ್ತಿ ಸಮಿತಿಯ ಹಂಗಾಮಿ ಕಾರ್ಯದರ್ಶಿ ಶ್ರೀ ಲಾಜ್ಲೋ ನಾಗಿಯವರು ನಮ್ಮ ರಾಷ್ಟ್ರೀಯ ಆಯುಕ್ತರಿಗೆ ಬರೆದ ಪತ್ರದಲ್ಲಿ ಇಂತಹ ಪ್ರಶಸ್ತಿಗೆ ತಾವು ಅತ್ಯಂತ ಸೂಕ್ತ ಮತ್ತು ಸಮರ್ಥ ವ್ಯಕ್ತಿಯೆಂದೂ, ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ ಭಾಗವಹಿಸಲು ತಮಗೆ ಅತ್ಯಂತ ಸಂತೋಷವೆಂದೂ ಹೇಳಿದ್ದಾರೆ.

— **ಸಂಪಾದಕ**

# Highest International Distinction to National Commissioner

It is a matter of great pride to record here that Sardar Lakshman Singh, our beloved National Commissioner has been awarded the World Scouting's highest distinction, "Bronze Wolf" by the World Honours and Awards Committee, Geneva.

Mr. Laszlo Nagy, Acting Secretary of World Honours and Awards Committee in his letter addressed to our National Commissioner has said that he richly deserves it and he will be very happy to be part of the awards ceremony.

*— Editor*

ADVISE FOR NEW LEADERS

# Friendly—Fair—Firm

Effective leadership is based on trust and teamwork. When you start working with a group of boys, be firm and be consistent. Boys will try you out, like they do a new teacher. Remember the three F's: friendly, fair and firm.

Avoid long inspections or announcements. When you're explaining a new game or a contest, have the boys sit down. Command their complete attention with attention-getting tricks like holding up an object, relating a true or imaginary case history, or throwing out a challenge.

Be brief but clear and let boys demonstrate for you. Work through and support your patrol leaders or sixers. You'll find that hand signals or the freeze signals will stop the action more effectively than too much yelling or whistle-blowing, and a wild duck or another animal call is useful occasionally.

Make the program fun, adventurous and fast-moving with imaginative and varied novelty games and mystery challenges. Like all people, boys learn best by doing, and they learn fast if you teach through games. Stress the outdoors in your program and hold surprise events like simulated casualties or rope-rescues that dramatize "real" situations.

Always expect boys to take ceremonies and instructions seriously, and demand their best efforts in badgework. Encourage smartness of uniform and discipline.

To win his trust, you must get to know each boy's characteristics and needs. You should praise a boy in public when praise is due, but never ridicule him, pick on him or put him down in front of others.

It's unfair to punish a whole group for one boy's misbehaviour, or to let the antics of a few "clowns" destroy the program for everyone. When discipline is required, use Scouting methods; if necessary, your Court of Honour or Sixers' Council.

If boys get out of hand, pull in the reins. Talk very softly and stand calmly when they seem too exuberant and you'll find that your actions will settle them down.

Scouters are responsible for each boy's safety and welfare, so don't take chances especially outdoors. Outlaw tent-raiding or initiations at camp. These kinds of activities breed insecurity rather than spirit, and provide fun only at the expense of someone else.

If you earn the boys' respect, you'll gain their cooperation. Help each boy to develop a sense of selfworth and achievement. The boy who is scared, shy, or disabled in any other way, needs much encouragement and reassurance to build his confidence. The lonely, perhaps fatherless boy needs your companionship and guidance.

Above all, remember that boys are great copycats who will imitate someone

they admire. Your personal example as you live the spirit of Scouting will prove far more effective for character-building than lectures. If a leader has a habit of grumbling, losing his temper or using sarcasm, his boys will develop similar habits. If he is sloppy in uniform or personal hygiene, they will be too. You don't have to be a phoney, but you'll never win by trying to "inspire" your boys with foul language, unhealthy habits, dirty jokes or cheating.

Remember that a part of you will live on in each of your boys for the rest of his life.

**by Bud Jacobi**
With acknowledgement : Canadian Leader

---

# Inter District Camp held at Hospet

The Inter-District First Class Scouts and Guides Camp went on very successfully from 7th to 10th of Dec. '86 at Gunda Forest, Hospet taluk. 65 Scouts and 5 Guides from Raichur-Bellary districts underwent training.

They were divided into five groups and arranged training in bases from 6-30 a.m. to 6-30 p.m. They were trained in Tender Foot, II class and I class subjects. Hike was arranged and also All-Faith Prayer for the Scouts and Guides.

The camp was inaugurated by Sri S. N. Rame Gouda, President, Rotary Club, Hospet and Sri B. Pampapathi, President, City Municipal Council, Hospet, presided.

Sri Rame Gouda in his speech said that the Scouting and Guiding should be made compulsory for all the children. Service projects are to be taken up with the help of similar international organisations like Rotary, Lions, Jaycees. Sri Pampapathi assured that he will give all possible help to develop this movement in Hospet taluk. He sanctioned Rs. 500/- for local association. Sri K. Patreppa, Deputy Director of Public Instruction, Bellary, expressed his happiness regarding this training camp. During his valedictory address he expressed that the children took very good training during this camp. He also assured to give all possible help to develop this movement in Bellary district. Sri S. Gururaja Rao presided over the valedictory function. He requested all the Scouts and Guides to take up service projects and help the poor and needy.

Sri R. Venkanna, A. S. O. C. (S) welcomed and Sri A. M. Mallikarjuniah gave vote of thanks. Sri K. Ramachandra was the leader of the camp. Sarvasri H. Thukarama Rao, Manjunathappa, Abdul Azeez, A. M. Mallikarjunaih and K. Ramachandra assisted in the camp. The camp concluded on 10th Dec. '86.

# 10th Asia Pacific Jamboree at Hyderabad

10th Asia Pacific Jamboree was held at Himayatsagar about 16 Kms from Hyderabad from 3rd to 9th January 1987. This is the first time that an Asia Pacific Regional Jamboree was conducted in India after Asia Pacific Region was formed 30 years ago. The Jamboree was inaugurated by H.E. Gyani Zail Singh, President of India, on 4th January 1987. Sri S.B. Chavan, Hon'ble Chief Minister of Maharashtra and President, Bharat Scouts and Guides, and Sri N.T. Rama Rao, Hon'ble Chief Minister of Andhra Pradesh, were present.

The Karnataka contingent consisting of 286 Scouts, 160 Guides, 11 Scouters and 5 Guiders participated in the Jamboree. Major M.R. Narayan Singh, State Commissioner(S) was the Leader of the Scout contingent, with Sri M. Halagappa as Deputy Contingent Leader, and Smt. Leeladevi R. Prasad, State Commissioner(G) was the Leader of the Guide contingent with Smt. S.K. Prabha as Deputy Contingent Leader. The Get-together camp of the contingent was held from 1st to 3rd January 1987 at the Jamboree premises at Hyderabad. Our State contingent had participated in all the activities of the Jamboree. Their participation in "Do-it-Yourself activities" was highly appreciated. The Pageant put up by our contingent was one of the best items of activities and everyone who witnessed the Pageant, i. e., NADA HABBA, highly appreciated.

Our State has also contributed for the grand success of the Jamboree by way of lending the services of experienced staff of State Headquarters to work on the staff of the Jamboree. We are also happy to mention that Sri V.P. Deenadayalu Naidu, our State Chief Commissioner who is also the Chief Commissioner (Scouts) India, was the Deputy Camp Chief of the Jamboree. The other members of the staff are as follows:–

1) Major M.R. Narayan Singh, SC(S) was in charge of the Central Kitchen.
2) Sri S. Audikesavalu, State Org. Commissioner(S) as Programme Officer.
3) Sri K.S. Shankar, State Trg. Commissioner(S) was incharge of 'Do-it-yourself activity'.
4) Smt. Mythily Sampath, Miss Ravi Wesley and Sri F. J. Anthony Cruz were in charge of Exhibition.
5) Sri A.P. Nagesha Rao was incharge of Arena activities.
6) Smt. S.V. Janaki and Smt. P. Saroja were incharge of Reception, Enquiry and Jamboree office.
7) Sri Paul Wilkins-Sub-camp Chief.
8) 9 Rovers of HAL were specially invited by National Headquarters to be on the Security duty.

Our State contingent hosted dinner on 7-1-1987 to all the contingent leaders, overseas contingents and Jamboree Staff. Sardar Lakshman Singh, National Commissioner, Smt. Saroj Lalwani, Chief Commissioner(G), Smt. Syamala Chenulu, International Commissioner(G), Sri Del Silvestre

Executive Commissioner, Asia Pacific Region, Sri G. Ranga Rao, Director and other dignitaries attended the dinner and all of them expressed their praise for the excellent arrangements made by the State contingent to host the dinner.

Smt. Saroj Lalwani, Chief Commissioner(G), Smt. Syamala Chenulu, International Commissioner(G) along with our State Chief Commissioner attended the Flag Parade ceremony on 8th morning and the Chief Commissioner(G) and International Commissioner(G), Sri K. Thimmappa, Sri Madhav Singh, Sri Madhava Rao Janwadkar, Sri T.A. Manjunathachar, Smt. K.K. Leela, Smt. Rekha and Sri K.G. Murugendrappa assisted our State contingent in taking active part in all the activities. Dr. M.R. Narendra Kumar, Medical Officer was the contingent Doctor of the Jamboree. Sri C.R. Madhava Rao was the Accountant of the contingent.

Our Gateway was the main attraction for the participants at the Jamboree and



Mrs. S. Chenulu, International Commissioner (G) addressing our Scouts & Guides at the Hyderabad Jamboree.
Mrs. Saroj Lalwani, Chief Commissioner (Guides) and Sri V. P. Deenadayalu Naidu, Chief Commissioner (Scouts) are also seen.

Commissioner(G) addressed our Scouts and wished them all success.

The Valedictory of the Jamboree was held on 9-1-1986. Sri N. T. Rama Rao, Chief Minister, Andhra Pradesh gave the Valedictory address. Our Scouts and Guides took part in the March Past and their smart turn out was appreciated.

Smt. N.H. Kamalakshamma, State Org.

many of them posed for photographs at our Gate. Sri K.B. Shanmukhappa, State Secretary, Major T.K. Nagambal, Jt. State Secretary, Sri Gopalakrishna Holla, Headquarters Commissioner(S), Sri C.S. Reddy, Secretary, Bangalore Rural District, Sri M.A. Chelliah, Secretary, Bangalore South District, Smt. Geetha Nataraj, District Commissioner(G), Bangalore North, Dr. Sangameshwar Sardar, D.C.(S), Raichur Sri Joshi, District Commissioner(S) Bijapur,

Regd. No. B.G.W. 11

Sri Galagali, Secretary, Bijapur District, visited the Jamboree.

The Central Kitchen was managed by Sri R. Venkanna, Sri R. K. Ram Singh, Sri Nayak Bomman, Sri K. S. Shivakumar and Smt. Vijayalakshmi, ASOCs.

## National Youth Day - Birth Day of Swami Vivekananda

The Government of India have declared the Birth Day of Swami Vivekananda, the ideal symbol representing the entire youth community whose life and teachings are ever to be followed and emulated in their life by the youth of our Nation as National Youth Day on 12th January 1987.

Sri Ramakrishna Ashram, Bangalore organised the Birth Day of Swami Vivekananda on 12th January 1987 at Sri Ramakrishna Ashram, and the Government of Karnataka has declared Holiday on this occasion for the schools and colleges in Bangalore North and South Districts. Nearly 15,000 school and college students participated in this grand function.

387 Scouts, 43 Rovers, 181 Guides and 30 Adult Leaders of Bangalore South District participated in the above event and they also participated in the procession organised on the occasion. The President's Scouts and Guides and Rovers rendered service during the period.

His Excellency, A. N. Banerji, the Governor of Karnataka, received the participants at Sri Ramakrishna Ashram. Swami Chidanandji, President of the Ramakrishna Ashram addressed the participants on this National Youth Day.

*A Report from Bangalore South*

Published for the Bharath Scouts and Guides, Karnataka State Headquarters, Fort, Bangalore-560 002 by the State Secretary and printed at Naveen Mudran Private Limited, Bangalore-560 053.

To

BHARAT SCOUTS & GUIDES
Prop. P. Sivashankar Circle,
Fort, Bangalore-560 002